# ಕಾವ್ಯಮಂಜರಿ

## ಭಾಗ ೨

[ಆರ್ಟ್ಸ್ ವಿಭಾಗದ ಮಧ್ಯಮ (I. A.) ಪರೀಕ್ಷೆಯ ಕನ್ನಡ ಕಾವ್ಯಭಾಗ]



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೫೪

# ಮುನ್ನುಡಿ



ಈ ಸಂಪುಟವು ನಮ್ಮ ವಿಶ್ವವಿದ್ಯಾಲಯದಿಂದ ಕಳೆದ ವರ್ಷ ಪ್ರಕಟವಾದ 'ಕಾವ್ಯಮಂಜರಿ'ಯ ಮುಂದಿನ ಮೆಟ್ಟಲು; "ಆರ್ಟ್ಸ್" ವಿಭಾಗದ ಮಧ್ಯಮಪರೀಕ್ಷೆಗೆ ಗೊತ್ತುಮಾಡಿರುವ ಕನ್ನಡ ಕಾವ್ಯಭಾಗವು ಇದರಲ್ಲಿ ಸೇರಿದೆ. ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸಮಂಡಲದ ನಿರ್ದೇಶದ ಮೇರೆಗೆ, ಪ್ರೊ. ತೀ. ನಂ. ಶ್ರೀಕಂಠಯ್ಯ (ಅಧ್ಯಕ್ಷ), ಪ್ರಿ. ರಾ. ಯ. ಧಾರವಾಡಕರ, ಪ್ರೊ. ಆರ್. ಸಿ. ಹಿರೇಮಠ ಇವರನ್ನೊಳಕೊಂಡ ಉಪ ಸಮಿತಿಯವರು ಈ ಸಂಕಲನವನ್ನು ಸಂಪಾದಿಸಿ ಸಿದ್ಧಪಡಿಸಿದ್ದಾರೆ. ಇನ್ನೂ ಅಚ್ಚಾಗಿಲ್ಲದ 'ಕುಮಾರರಾಮನ ಸಾಂಗತ್ಯ'ದಿಂದ ಒಂದು ಭಾಗವನ್ನು ಆಯ್ದು ಪ್ರತಿಮಾಡಿ ಕಳಿಸಿಕೊಟ್ಟ ಕನ್ನಡ ಅಭ್ಯಾಸಮಂಡಲದ ಸದಸ್ಯರಾದ ಪ್ರೊ. ಡಿ. ಎಲ್. ನರಸಿಂಹಾಚಾರ್ಯರ ಸಹಾಯವನ್ನು ಇಲ್ಲಿ ನೆನೆಯಬೇಕು. ಕವಿಗಳ ಮತ್ತು ಸಂಕಲಿತ ಭಾಗಗಳ ವಿಷಯವಾಗಿ ಒಂದೆರಡು ಪರಿಚಯದ ಮಾತುಗಳನ್ನೂ, ಕಠಿನವೆನಿಸಬಹುದಾದ ಕೆಲವು ಶಬ್ದಗಳ ಅರ್ಥಗಳನ್ನೂ ಹಿಂದಿನಂತೆಯೇ ಇಲ್ಲಿಯೂ "ಟಿಪ್ಪಣಿ"ಯಾಗಿ ಕೊಡಲಾಗಿದೆ. ಹಳಗನ್ನಡದ ಕಾವ್ಯಭಾಗಗಳಲ್ಲಿ ಐಕಾರ ಱಕಾರಗಳನ್ನೂ ಮಿಕ್ಕವುಗಳಲ್ಲಿ ಱಕಾರವನ್ನೂ ಬಳಸಲಾಗಿದೆ.

ಗ್ರಂಥದ ಮುದ್ರಣಕಾರ್ಯವನ್ನು ಶೀಘ್ರವಾಗಿ ಅಂದವಾಗಿ ಮಾಡಿಕೊಟ್ಟ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದವರಿಗೆ ವಂದನೆಗಳನ್ನು ಸಲ್ಲಿಸುವುದು ನಮ್ಮ ಸಂತೋಷದ ಕರ್ತವ್ಯ. ಕಾವ್ಯಮಂಜರಿಯ ಮೊದಲನೆಯ ಭಾಗದಂತೆ ಈ ಎರಡನೆಯ ಭಾಗವೂ ವಿದ್ಯಾರ್ಥಿಗಳಿಗೂ ಕಾವ್ಯಾಭ್ಯಾಸಿಗಳಿಗೂ ಉಪಯುಕ್ತವಾಗಲೆಂದು ಹಾರೈಸುತ್ತೇವೆ.

— ತೀ. ನಂ. ಶ್ರೀಕಂಠಯ್ಯ

# ವಿಷಯಸೂಚಿಕೆ



# ಕಾವ್ಯ ಮಂಜರಿ—೨

## ೧

## ಪಂಪ: 'ಭೀಷ್ಮನ ವೀರಪಟ್ಟ'

ಶ್ರೀನಾರೀವಲ್ಲಭನಭಿ
ಮಾನಧನಂ ಹರಿಗನಾ ಕುರುಕ್ಷೇತ್ರದೊಳಂ
ತೇನುಂ ಮಾಣದೆ ಬಿಟ್ಟುದ
ನಾ ನೆಗೞ್ದ ಸುಯೋಧನಂಗೆ ಚರರಱಿಪುವುದುಂ ‖ ೧

ಗುರು ಗುರುಸುತ ಶಕುನಿ ಕೃಪಾಂ
ಗರಾಜರಂ ಬರಿಸಿ ನುಡಿದನವನಿಪನೇಂ ಕೇ
ಳ್ದಿರೆ ಪಾಂಡುಸುತರ ಮುನಿಸಿನ
ತಱಿಸಲವಿನ ಚಲದ ಬಲದ ಕಲಿತನದಳವಂ ‖ ೨

ಬಂದು ಕುರುಕ್ಷೇತ್ರದೊಳಳ
ವೊಂದಿರೆ ನಮ್ಮೊಳ್ ಕಡಂಗಿ ಮಿಗೆ ತಳ್ತಿಱಿಯ
ಲ್ಕೆಂದಾನುಂ ಬಂದಿರ್ದರಿ
ದೇಂ ದಾಯಿಗತನಮನೆಮಗವರ್ ತೋಱಿದಪರ್ ‖ ೩

ಪಡೆವಳ್ಳಂ ಗಡಮಾ ಬಲಕ್ಕೆ ದಲೆ ಧೃಷ್ಟದ್ಯುಮ್ನನೆಂಬೊಳ್ಳಿಯಾ
ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ ಪೇರೊಟ್ಟೆಯಾ ಮತ್ಸ್ಯನುಂ
ಗಡಮಂತಾ ಬಲಕಾಳ್ವನೇನಱಿಯಿರೇ ಧರ್ಮಜ್ಞನಾ ಧರ್ಮಜಂ
ಗಡಮೇಂ ನಾಯಕರೊಳ್ಳಿದರ್ ನೆರೆದರೋ ಕಾದಲ್ಕೆ
ಮತ್ಸೈನ್ಯದೊಳ್ ॥ ೪

ಎಂಬುದುಂ ಕುಂಭಸಂಭವನಿಂತೆಂದಂ—

ಕಳವೇಟ್ಟಿರ್ದ್ದ ಕುರುಭೂಮಿಯಂ ಕಳಕವರ್ ವಂದಿರ್ದರೆಂದಂತೆ ದೋ
ರ್ವಳ ಚಾತುರ್ವಳ ತತ್ಸುಹೃದ್ಬಳಮನಿನ್ನೇಗೇಳ್ವಪ್ಪೆ ಪಾಂಡವರ್
ಬಳಸಂಪನ್ನರುದಗ್ರದೈವಬಳಸಂಪನ್ನರ್ ಮರುಳ್ಮಾತನಿ
ನ್ನುೞಿ ಗಾಂಗೇಯರ ಪೇೞ್ದುದೊಂದು ತೆಱದಿಂ ನೀಂ ಕಾದು
ದುರ್ಯೋಧನಾ ॥ ೫

ಎಂಬುದುಮಾ ಮಾತಂ ಮನದೆಗೊಂಡಂತೆಗೆಯ್ವೆನೆಂದನಿಬರುಮಂ ವಿಸರ್ಜಿಸಿ ನಿಶಾಸಮಯದೊಳ್ ಪತ್ತೆಂಟು ಕೆಯ್ದೀವಿಗೆಗಳ ಬೆಳಗಿನೊಳಂ ಕತಿಪಯಪರಿಜನಪರಿವೃತನಾಗಿ ರಾಜರಾಜಂ ಸಿಂಧುಜನರಮನೆಗೆ ವಂದು ವಾಹನದಿಂದಮಿೞಿದು ಕುರುಪಿತಾಮಹಂಗೆಱಗಿ ಪೊಡೆವಡುವುದುಂ ಪರಸಿ ಮಂಚದೊಳೇಱಲ್ ಕರೆದೊಡೊಲ್ಲೆಂ ಮಹಾಪ್ರಸಾದಮಿಂತಿರ್ಪೆನೆಂದು ಮಣಿಮಯ ಹೇಮಾಸನದೊಳ್ ಕುಳ್ಳಿರ್ದನಂ ನೋಡಿ ಕಜ್ಜಂ ಪುಟ್ಟಿ ದೊಡೆಮಗೆ ಬಟಿಯಟ್ಟದೀ ಪೊೞ್ತಿದಾವುದು ಮನೆವಾೞ್ತಿಗೆೞ್ತಂದ ಯೆಂದೊಡೆ ಸುಯೋಧನನಿಂತೆಂದಂ—

ಹರಿಬಲದಿಂ ಪಾಂಡವರನು
ವರಮಂ ಪೊತ್ತಿಸಿದರೆನ್ನೊಳಾಂ ಕರಮುಱಿದಾ
ಹರಿಯಂ ಕೋಡಗಗಟ್ಟಿ
ಗಿರೆ ಕಟ್ಟಿದೊಡಂದು ನೀಮೆ ಬಿಡಿಸಿದಿರಲ್ತೇ ॥ ೬

ಕರಿಗಂ ಪರಮಾಣುಗಮುಂ
ತರಮಾವುದೊ ನಿಮಗಮಸುರವೈರಿಗಮೇನಂ
ತರಮುಂತೆ ನಿನ್ಮೊಳಗಗ್ಗದ
ಪರಶುಧರಂ ಪೊಣರ್ದು ತಾನದಂದೇನಾದಂ ॥ ೭

ಕೊರಲೊಳ್ ಕಟ್ಟಿದ ದೇವಿಯುಂತಿರುರದೊಳ್ ಶ್ರೀ ತೊಟ್ಟಲೊಳ್ ತೊಟ್ಟನಂ
ತರಮೆನ್ನೊಳ್ ನೆಲಸಿತ್ತು ನಿಮ್ಮ ದಯೆಯಿಂ ನಿಮ್ಮಂ ಕೂರಂ ನಚ್ಚಿ ಸಂ
ಗರಮಂ ಬಲ್ಲಿದರೊಳ್ ಪೊಣರ್ಚಿದೆನದರ್ಕೆನ್ನೊಳ್ ರಣಶ್ರೀ ರಣಾ
ಜಿರದೊಳ್ ಮಾಣದೆ ಪೊರ್ದುವಂತೆ ಬೆಸಸಿಂ ನಿಮ್ಮೊಂದಭಿಪ್ರಾಯಮಂ ॥ ೮

ಎಂದು ನುಡಿದ ತನ್ನ ಮೊಮ್ಮನ ನಯದ ವಿನಯದ ನುಡಿಗಳ್ಗೆ ಕರುಣಿಸಿ ಕುರುವೃದ್ಧನಿಂತೆಂದಂ—

ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ ನೀಂ ಪೃಥಾ
ಸುತರಂ ನೋಯಿಸಲಾಗದೆಂದು ನುಡಿದೇನಾಮಾರ್ತೆಮೇ ನಿನ್ನೊರಂ
ಟುತನಂ ಕೈಗೞಿವಾಯ್ತುದಪ್ಪೊಡೆ ಮಹಾಭಾರಾವತಾರಂ ರಣೋ
ದ್ಯತನಾಗೆಂಬುದನೆಮ್ಮನನ್ನರಮೊಲೇಂ ನೀಂ ಪ್ರಾರ್ಥಿಸಲ್ವೇೞ್ಪುದೇ ॥ ೯

ಎಂಬುದುಂ ಮಹಾಪ್ರಸಾದಮೆಂದು ದುರ್ಯೋಧನಂ ಪೋದನಿತ್ತ ಗಾಂಗೇಯಂ ತನ್ನಂತರ್ಗತದೊಳ್—

ಅಣಿಯುರಮೊದವಿದ ಮುಳಿಸಿನೊ
ಳಣಮುಱಿದವರೆಂದು ರಣದೆ ಜಯಿಸಲ್ ನಾರಾ
ಯಣನೊಳಮುದಾತ್ತನಾರಾ
ಯಣನೊಳಮಿಂತೆತ್ತಿಕೊಂಡ ಗಂಡರುಮೊಳರೇ ॥ ೧೦

ಎನ್ನನೆ ನಚ್ಚಿದನನುವರ
ಕೆನ್ನನೆ ಪೂಣಿಸಿದನೆನಗೆರಟ್ಟಿಂಡಮುಮೋ
ರನ್ನರೆ ದಲೆಂತು ಕಾದುವೆ
ನೆನ್ನಯ ಮಕ್ಕಳೊಳಮೆನ್ನ ಮೊಮ್ಮಕ್ಕಳೊಳಂ ॥ ೧೧

ಮಕ್ಕಳ ಮೊಮ್ಮಕ್ಕಳ ರಥ
ಮೆಕ್ಕೆಯಿನೆಡೆಗೊಂಡೊಡವರನೋವದೆ ರಣದೊಳ್
ಮಕ್ಕಳನಾಂ ಕೊಂದೊಡೆ ತ
ನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ ॥ ೧೨

ನರನಾರಾಯಣರಿರ್ವರೆ
ಧುರದೊಳ್ ಮಾರ್ಕೊಳ್ವರೆನ್ನನೊರ್ವಂ ಮೊಮ್ಮಂ
ಪರಮಗುರುವೊರ್ವನವರಿ
ರ್ವರುಮಂ ಕಾದಟಿವೆನುಟಿದ ರಿಪುನೃಪಬಲಮಂ ॥ ೧೩

ಎಂದು ತನ್ನೊಳ್ ಬಗೆಯುತ್ತಿರ್ಪಿನಮತ್ತ ದುರ್ಯೋಧನಂ ಸಹಸ್ರಕಿರಣೋದಯದೊಳನೇಕಸಹಸ್ರನರಪತಿಪರಿವೃತನುಮಾಗಿ ಮಂದಾಕಿನೀ ತನೂಜಂಗೆ ಬಟಿಯನಟ್ಟಿ ಬರಿಸಿ ಮಣಿಮಯಪೀಠದೊಳ್ ಕುಳ್ಳಿರಿಸಿ ದೇವಾಸುರಯುದ್ಧದೊಳ್ ಗುಹಂಗೆ ವೀರಪಟ್ಟಮಂ ಕಟ್ಟುವ ಪುರಂದರನಂದಮನೆ ಪೋಲ್ತು—

ತುಂಗಮೃದಂಗಶಂಖಪಟಹಧ್ವನಿ ದಿಕ್ತಟದಂತನೆಯ್ದೆ ವಾ
ರಾಂಗನೆಯರ್ ಚಳಲ್ಲುಳಿತ ಚಾಮರಮಂ ನೆರೆದಿಕ್ಕೆ ಪಂಚರ
ತ್ನಂಗಳುಮಂ ಪುದುಂಗೊಳಿಸಿ ಪೊಂಗಳಸಂಗಳೊಳಿರ್ದ ಪುಣ್ಯತೋ
ಯಂಗಳೊಳಟ್ಕಟಿಂ ಮಿಸಿಸಿ ಕಟ್ಟಿದನಾ ವಿಭು ವೀರಪಟ್ಟಮಂ ॥ ೧೪

ಅಂತು ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರನೆನ್ನ ಮುಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯನವಕರ್ಣಿಸಿ ಕರ್ಣನಿಂತೆಂದಂ—

ಭಗವತಿಯೇಱುವೇೞ್ವ ತೆಱದಿಂ ಕಥೆಯಾಯ್ತಿವರೇಱು ನೀನಿದಂ
ಬಗೆದಿವರಿನ್ನುಮಾಂತಿಱಿವರೆಂದು ವಿಮೋಹಿಸಿ ವೀರಪಟ್ಟಮುಂ
ಬಗೆಯದೆ ಕಟ್ಟಿದೈ ಗುರುಗಳಂ ಕುಲವೃದ್ಧರನಾಜಿಗುಯ್ದು ಕೆ
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ
ಸುಯೋಧನಾ ॥ ೧೫

ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕ
ಣ್ಗೆಟ್ಟ ಮುದುಪಂಗೆ ಪಗೆವರ
ನಿಟ್ಟಿಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ ॥ ೧೬

ಆದಿಯೊಳವರಂ ಪಿರಿದೊಂ
ದಾದರದಿಂ ನಡಪಿದಜ್ಜರಪ್ಪುದಱಿಂದಂ
ಕಾದರಿವರವರೊಳವರುಂ
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ ॥ ೧೭

ಎಂಬುದುಮಾ ನುಡಿಗೆ ಸಿಡಿಲ್ದು ಕುಂಭಸಂಭವನಿಂತೆಂದಂ—

ಸಿಂಗದ ಮುಪ್ಪುಂ ನೆಗೞ್ದೀ
ಗಾಂಗೇಯರ ಮುಪ್ಪುಮಿಳಿಕೆವಡೆಗುಮೆ ಮನಮಾ
ತಂಗಂಗಳಿನಸುಹೃಚ್ಚತು
ರಂಗ ಬಲಂಗಳಿನದೆಂತುಮಂಗಾಧಿಪತೀ ॥ ೧೮

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾಮಧ್ಯದೊಳ
ಗ್ಗಲಿಸಿದ ಮದದಿಂ ನಾಲಗೆ
ಕುಲಮಂ ತುಬ್ಬುವವೊಲುಱದೆ ನೀಂ ಕೆಡೆನುಡಿವೈ ॥ ೧೯

ಎಂದು ನುಡಿದ ಗುರುವಿನ ಕರ್ಣಕಠೋರವಚನಂಗಳ್ಗೆ ಕರ್ಣಂ ಕಿನಿಸಿ—

ಕುಲಮನೆ ಮುನ್ನಮುಗ್ಗಡಿಪಿರೇಂ ಗಳ ನಿಮ್ಮ ಕುಲಂಗಳಾಂತು ಮಾ
ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀಗಳೀ
ಕಲಹದೊಳಣ್ಣ ನಿಮ್ಮ ಕುಲಮಾಕುಲಮಂ ನಿಮಗುಂಟು
ಮಾಡುಗುಂ ॥ ೨೦

ಗಂಗಾಸುತಂ ಪೃಥಾಸುತ
ರಂ ಗೆಲ್ದೊಡೆ ತಪಕೆ ಪೋಪೆನವರ್ಗಳ ಕೆಯ್ಯೊಳ್
ಗಾಂಗೇಯನೞಿದೊಡಹಿತರ
ನಾಂ ಗೆಲೆ ತಳ್ತಿಱಿವೆನನ್ನೆಗಂ ಬಿಲ್ವಿಡಿಯೆಂ ॥ ೨೧

ಎಂದು ಕರ್ಣಂ ಪ್ರತಿಜ್ಞೆಗೆಯ್ವುದುಂ ಸಿಂಧುತನೂಜನಿಂತೆಂದಂ—

ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
ಚಲೆದಪೆಯಣ್ಣ ಸೂೞ್ಪಡೆಯುಲಪ್ಪುದು ಕಾಣ
ಮಹಾಜಿರಂಗದೊಳ್ ॥ ೨೨

ಎಂದು ಮತ್ತಮಿಂತೆಂದಂ—

ಮುದುಪರ ಬಿಲ್ಬಲ್ಮೆಯುಮಿಱಿ
ವವಟುಂ ಬಗೆವಾಗಳಣ್ಣನೆಂದಂತುಟೆ ತ
ಪ್ಪದು ಕರಮೆ ತುಚ್ಛಮಕ್ಕುಂ
ಕದನದೊಳಿನ್ನೆನ್ನ ನುಡಿದ ನುಡಿಯಂ ಕೇಳಿಂ ॥ ೨೩

ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ
ಪಡುವೆಣ್ಗಾವುದು ಪೋಗೆ ಪೋ ಗಡಿಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಱ್ಪೆನೋವದೆ ಪಯಿಂಛಾಸಿರ್ವರಂ
ಯುದ್ಧದೊಳ್ ॥ ೨೪

ಎಂದು ಮಹಾಪ್ರತಿಜ್ಞಾರೂಢನಾದ ಗಾಂಗೇಯನಳವನಳವಲ್ಲದೆ ಪೊಗೞ್ವವರಂ ಬೀಡಿಂಗೆ ಬಿಜಯಂಗೆಯ್ವವೆಂದು ಕೞಿಪಿ ಮಱುದಿವಸಂ ಯುದ್ಧಸನ್ನದ್ಧನಾಗಿ ಪ್ರಯಾಣಭೇರಿಯಂ ಪೊಯ್ಸಿದಾಗಳ್—

ಕೆಡೆದಂ ಪದ್ಮಜನಾಸನಾಂಬುರುಹದಿಂದಾಗಳ್ ಸುರೇಂದ್ರಾಚಳಂ
ನಡುಗಿತ್ತರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ ಮರುಳ್ದಪ್ಪಿದಳ್
ಮೃಡನಂ ಗೌರಿ ಸಮಸ್ತಮೀ ತ್ರಿಭುವನಂ ಪಂಕೇಜಪತ್ರಾಂಬುವೋಲ್
ನಡುಗಿತ್ತೆಂಬಿನಮುರ್ವಿ ಪರ್ವಿದುದು ತತ್ಸನ್ನಾಹಭೇರೀರವಂ ॥ ೨೫

## ೨

# ರನ್ನ : ‘ ನೀರೊಳಗಿರ್ದುಂ ಬೆಮರ್ತನುರಗಪತಾಕಂ ’

ದ್ಯುನದೀಜಂ ಕುಡೆ ತೋಯಮಂತ್ರಬಲದಿಂ ಪೊಕ್ಕಿರ್ದಪಂ ಕಾಲವಂ
ಚನೆಗೆಯ್ವಲ್ ಕೊಳನಂ ಹಲಾಯುಧಕೃಪಾಶ್ವತ್ಥಾಮರುಂ ನಾಗಕೇ
ತನನೊಳ್ ನಾಳೆಯೆ ಕೂಡಿ ಬರ್ಪರವರಿನ್ನುಂ ಬಾರದನ್ನಂ ಸುಯೋ
ಧನನಂ ಮುನ್ನಮೆ ಕೆಯ್ಗೆ ಮಾಟ್ಪುದು ಬೞಿಕ್ಕಾಗರ್ಗಂ ಗೆಲಲ್
ಬರ್ಕುಮೋ ॥ ೧

ಅದಱಿಂದೀಗಳೆ ಪೋಗಿ ಪೂಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪಱಿವಡಿಪುದೆಂದರವಿಂದನಾಭಂ ಧರ್ಮನಂದನಾದಿಗಳನೊಡಗೊಂಡು ಬಂದು ಕಿರಾತದೂತಸಂಸೂಚಿತಮಪ್ಪ ಹಲಕುಲಿಶಕಮಲ ಶಂಖಚಕ್ರಾಂಕಿತಲಕ್ಷಣಮಪ್ಪಡಿವಜ್ಜೆಯಂ ಕಂಡು ಸುಯೋಧನನಡಿವಜ್ಜೆಯಪ್ಪುದಂ ತಪ್ಪಿಲ್ಲದಱಿದು ನಿಸ್ಸಂದೇಹಚಿತ್ತರಾಗೆ—

ಭರತಜರೊಳ್ ಮುನ್ನಿಲ್ಲದ
ಪರಿಭಾಷೆಯನುಂಟುಮಾಡಿ ಪೆಱಗಡಿಯಿಟ್ಟಂ
ಕುರುರಾಜನೆಂದು ಲಜ್ಜಾ
ಭರದಿಂದಂ ತಲೆಯನೆಱಗಿದಂ ಧರ್ಮಸುತಂ ॥ ೨

ಎಂದು ದುರ್ಯೋಧನನ ಮಾನದ ಧೈರ್ಯಕ್ಷತಿಗೆ ಮನಃಕ್ಷತನಾಗಿ ಸಿಗ್ಗಾಗಿ ತಲೆಯಂ ಬಾಗಿ ಧರ್ಮನಂದನನಿರೆ—

ವಿರುವತ್ಸಾರಸರಾಜಹಂಸರವದಿಂದೇವಂದಿರೀಬನ್ನಿಮಿಂ
ತಿರಿಮೆಂದಾದರಿಪಂತುಟಾಯ್ತು ಪವನೋದ್ಧೂತೋತ್ತರಂಗಾಂಬುವಿಂ
ತರದಿಂ ಕಾಲ್ಗೆಱಪಂತುಟಾಯ್ತು ವಿಕಚತ್ಪಂಕೇಜದಿಂ ಪಂಕಜಾ
ಕರಮರ್ಘ್ಯಂಗುಡುವಂತುಟಾಯ್ತು ನಿಲಜಂಗಭ್ಯಾಗತಪ್ರೀತಿಯಿಂ ॥  ೩

ಮರುದಾಂದೋಳಿತಜಂಬೂ
ತರುಶಾಖಾಹಸ್ತಕಿಸಲಯಂ ಮಿಳಿಮಿಳಿರು
ತ್ತಿರೆ ಸರದೊಳ್ ತೋಱಲ್ಕೇಂ
ಕರೆವವೊಲಾಯ್ತು ನಿಲಜಂಗೆ ದುರ್ಯೋಧನನಂ ॥  ೪

ಭವದಹಿತನಿಲ್ಲಿದಂ ಕೌ
ರವಾರಿ ನೋಡೆಂದು ಮೂಡಿ ಮುೞ್ಕಾಡಿಯೆ ತೋ
ರ್ಪವೊಲಲ್ಲಿ ಮೂಡಿ ಮುೞ್ಕಾ
ಡುವ ವಿಹಗಾವಳಿಗಳೇಂ ಮನಂಗೊಳಿಸಿದುವೋ ॥  ೫

ಮೀಂಗುಲಿಗವಕ್ಕಿ ಕೊಳನೊಳ್
ಮೀಂಗೆಱಗುವ ತೆಱದಿನೆಱಗಿ ನೋಡಿಲ್ಲಿರ್ದಂ
ಪಿಂಗಾಕ್ಷನೆಂದು ಪವನಸು
ತಂಗಿರ್ಪೆಡೆದೋರ್ಪ ತೆಱದಿನೇಂ ಸೊಗಯಿಸಿತೋ ॥  ೬

ಮರುದಾತ್ಮಜ ನಿಜರಿಪು ತಲೆ
ಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂ
ತಿರೆ ಪೊಳೆದು ತೋರ್ಪ ಜಲಚರ
ಪರಿಕರಮಱಿಪಿದುವು ತಾಮೆ ದುರ್ಯೋಧನನಂ ॥  ೭

ಒಳಗಾದಂ ಪಗೆವಂ ಸರೋವರದೊಳಿರ್ದಿನ್ನೆತ್ತವೋಪಂ ಸರೋ
ಜಲಮಂ ಮುಂ ತವೆ ಪೀರ್ದು ಪೀರ್ವೆನಸುಹೃದ್ರಕ್ತಾಂಬುವಂ ತೋರ್ಪೆನೆ
ನ್ನಳವಂ ಮತ್ಪತಿಗೆಂದು ಸಂತಸದೆ ಬಾಹಾಸ್ಫಾಲನಂಗೆಯ್ದು ದಿ
ಗ್ವಲಯಂ ಮಾರ್ದನಿಯಿಟ್ಟವೋಲ್ ಗಜಱಿದಂ
ಚಾಳುಕ್ಯಕಂಠೀರವಂ ‖ ೮

ಆಗಳಾ ಕೊಳನಂ ಬಳಸಿ ಬಂದು ನಿರ್ಭರಮಾಗಿ ಬೊಬ್ಬಿಱಿದಾರ್ದಬ್ಬರಂಗೆಯ್ದು ಪಲತೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ ಭೇರಿಗಳಂ ತಾಟಿಸಿಯುಂ ಕಾಹಳೆಗಳನೊತ್ತಿಸಿಯುಂ ಪಂಚಮಹಾವಾದ್ಯಂಗಳಂ ಬಾಜಿಸಿಯುಂ ಎಂತುಂ ಪೊಱಮಡಿಸಲಾಱದೆ ಸುಯೋಧನನಂ ಪೆಸರ್ಗೊಂಡು ನಕುಲನಾಸ್ಫೋಟಿಸಿ—

ಅಂಕವ ಕಲಿ ಕುರುವಂಶಶ
ಶಾಂಕನೆ ದುರ್ಯೋಧನಾಂಕನೆನೆ ನೆಗಳ್ದಯಶಃ
ಪಂಕದೊಳಮೀ ಸರೋವರ
ಪಂಕದೊಳಂ ನೀನೆ ನಿನ್ನನಿಂತರ್ದುವುದೇ ‖ ೯

ಇಱಿವಬೆಡಂಗನೊಳಿಱಿಯಲ್
ನೆಱೆಯಯ್ ನಿನಗಾನೆ ನಾಲ್ವೆನೆಕ್ಕತುಳಕ್ಕಂ
ನೆಱೆದಿರ್ದೆನಿರದೆ ಕೊಳನಂ
ಪೊಱಮಡು ತೋಱಿದಪೆನೆನ್ನ ಕೊಂತದ ಸವಿಯಂ ‖ ೧೦

ಎನೆ ಸಹದೇವನುತ್ಕಟಿಸಿ —

ಎಂದಿಂಗೆ ನಿನಗೆ ಸಾವಿ
ಲ್ಲೆಂದಿರ್ದಯ್ ನಿನ್ನ ಮನದೊಳಿನ್ನೆವರಂ ನೀ
ನೊಂದಂ ಬಗೆದೊಡೆ ವಿಧಿ ತಾ
ನೊಂದಂ ಬಗೆದತ್ತು ಸಕಲಕುರುಕುಲಕೇತೂ ‖ ೧೧

ಜವನ ಮಗನಿರ್ಕೆ ಸುಭಟರ
ಜವನಿರ್ಕೆ ಸಿತಾಶ್ವನಿರ್ಕೆ ನಕುಲನುಮಿರ್ಕ
ಣ್ಮುವೊಡೆನ್ನ ಬಾಳ ಸವಿಯಂ
ಸವಿನೋಡಿ ಬೞಿಕ್ಕೆ ನೀರ ಸವಿಯಂ ನೋಡಾ ‖ ೧೨

ಎಂಬುದುಮರ್ಜುನಂ ವಿಜೃಂಭಿಸಿ—

ಮಾನಧನನೆನಿಸಿ ನಿನ್ನಬಿ
ಮಾನಕ್ಷತಿಮಾಡಿದಯ್ ಸುಯೋಧನ ನೀಂ ಮ
ತ್ತೀ ನೀರೊಳಗೆಸಡಿರ್ಕುಂ
ಮೀನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ ‖ ೧೩

ಮಾನಧನ ನಿನ್ನ ಸುತಸ್ಯೈ
ಸ್ಯಾನುಜಶತಕಕ್ಕೆ ಕೇತುವಲ್ಲದೆ ಗಂಗಾ
ಸೂನು ಮೊದಲಾದ ಪಲರ್ಗಂ
ನೀನೊರ್ವನೆ ಕೇತುವಾದೆ ಕುರುಕುಲಕೇತೂ ‖ ೧೪

ಕುಮರಂಕರಾಮನೃಪನೊಳ್
ಸಮರಂ ನಿನಗರಿದು ತಕ್ಕುದೆನಗಂ ನಿನಗಂ
ಸಮರಂ ನಿನ್ನಂ ನುಂಗ
ಲ್ಕಮೋಘಶರಮಿರ್ದುವಿವಱ ಸವಿಯಂ ನೋಡಾ ‖ ೧೫

ಎಂಬುದುಂ ಧೃತರಾಷ್ಟ್ರನಂದನಂ ಮುನ್ನೆ ಗೆಯ್ದ ಧರ್ಮವುಂ ನೆನೆಯದೆ ಕುಲಕ್ರಮಯುಕ್ತಮಪ್ಪ ನಿರ್ಮಲಕ್ಷತ್ರಧರ್ಮಮನೆ ಬಗೆದು ಧರ್ಮನಂದನ ನಿಂತೆಂದಂ—

ಭರತಾನ್ವಾಯದೊಳಂದಿನಿಂದಿನೆಡೆಯೊಳ್ ಸಾಪತ್ನ್ಯದೊಳ್ ಬದ್ಧಮ
ತ್ಸರಮಿಲ್ಲಿಮ್ಮನಕಾರಣಂ ಕದಡಿದಯ್ ಸಾವೆಯ್ದಿದಯ್ ನಷ್ಟಸೋ
ದರಮಾಯಿತ್ತೆನಗಂ ಸ್ವಗೋತ್ರವಧೆಯಪ್ಪಾ ಪಾತಕಂ ಕೌರವೇ
ಶ್ವರ ನೀಂ ಸಂಧಿಗೊಡಂಬಡಿಂತು ಕೊಳನಂ ಪೊಕ್ಕಿರ್ಪುದೇಂ ತಕ್ಕುದೇ || ೧೬

ಎಂಬುದುಮಾ ನುಡಿಗೆ ಸೈರಿಸದೀ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱ
ಮಡುವನಲ್ಲನಿವಂಗಾನೆ ಬಲ್ಲೆನೆಂದು ಭೀಮಸೇನನುದ್ದಾಮಕೋಪಾಟೋಪ
ಚಿತ್ತದಿಂ ಬದ್ಧಭ್ರುಕುಟಿಯಾಗಿ—

ಬಳವದ್ವಿಗ್ರಹದೊಳ್ ನೀ
ನೊಳಗಿರ್ದಯ್ ಮುನ್ನೆ ನಿನ್ನ ಕುಲಮೆಲ್ಲಮನಾಂ
ಮುಳಿದಿಱಿದುಂ ಪಿಂದನೆ ಬರೆ
ಕೊಳದೊಳಗುಳಿದಿರ್ದು ಮರುಳೆ ಬರ್ದುಕಲ್ ಬಗೆವಾ || ೧೭

ಭವದನುಜನರುಣಜಲಮಂ
ಸವಿನೋಡಿದೆನಿಂತು ನಿನ್ನ ಬಲಜಲನಿಧಿಯಂ
ಸವಿನೋಡಿದೆನೀ ಕೊಳನಂ
ತವೆ ಪೀರ್ದು ಬೞಕ್ಕೆ ನಿನ್ನ ಸವಿಯಂ ನೋೞ್ಪೆಂ || ೧೮

ಸ್ವರಮಂ ಕೇಳಲ್ಕೆನ್ನು
ಗ್ರರೂಪಮಂ ನಿಂದು ನೋಡಲಣ್ಮದೆ ಸಮರಾ
ಕರಮಂ ಬಿಸುಟ್ಟು ಕಮಲಾ
ಕರಮಂ ಪೊಕ್ಕಿಲವೊ ಮರುಳೆ ಬರ್ದುಕಲ್ ಬಗೆವಾ || ೧೯

ಜಳದೊಳ್ ಮೀನಿರ್ಪವೊಲ್ ನೀಂ ಕೊಳದೊಳೆ ಮುೞುಗಿರ್ದಕ್ಕಟಾ ಕೋಡ ಸೇಡಿಂ
ಗೊಳಗಾದಯ್ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ ತೋಱಿದಯ್ ನಿ

ನ್ನಳವಂ ಚೀಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕಯ್ದುಗೊಳ್
ಕೌರವೇಂದ್ರಾ
ಚಳವಜ್ರಂ ಬಂದನೀತಂ ಕುರುಕುಲಮಥನೋದ್ಧೀಕರಂ
ಭೀಮಸೇನಂ ॥ ೨೦

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರಮೆಲ್ಲಿತ್ತೊ ಕೃಷ್ಣಾಂ
ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮ
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರಿಪಿದ ಸೊರ್ಕೀಗಳೇನಾದುದೆಂದಾ
ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ ॥ ೨೧

ಅಂತು ಮುಟ್ಟೆ ಮೂದಲಿಸಿ ನುಡಿದುಮೆಂತುಂ ಪೊಱಮಡಿಸಲಾಱದೆ—

ಎನಿತಂ ಪೊರ್ಕ್ಕಿರ್ದಪಯ್ ನೀಂ ಪೊಱಮಡು ಕೊಳದಿಂ
ದ್ರೌಪದೀದ್ರೋಹ ದುಶ್ಶಾ
ಸನದುಷ್ಟಜ್ಯೇಷ್ಠ ಭೀಷ್ಮಪ್ರಮುಖನಿಖಿಲಬಂಧುಕ್ಷಯೋತ್ಪನ್ನದುಃಖ
ಧ್ವನಿವಾರಿಚ್ಛಿನ್ನಧೈರ್ಯದ್ರುಮ ಯಮಸುತನಿಷ್ಕಾರಣದ್ವೇಷಿ ಭೀಮ
ಧ್ವನಿಯಂ ಕೇಳ್ದಿನ್ನುಮಿರ್ದಯ್ ಕುರುಕುಲವಿಲಯೋತ್ಪಾತ
ನೋತ್ಪಾತಕೇತೂ ॥ ೨೨

ಎಂದು ಮತ್ತಮಿರದೆ—

ಒಡೆಯಲಜಾಂಡಂ ಕುಲಗಿರಿ
ಕೆಡೆಯಲ್ ಪಿಳಿಯಲ್ಕೆ ಧಾತ್ರಿ ದಿವಿಜರ್ ನಡುಗ
ಲ್ಕೊಡರಿಸುವಿನಂ ಜಟಾಸುರ
ಹಿಡಿಂಬಬಕವೈರಿ ಸಿಂಹನಾದಂಗೆಯ್ದಂ ॥ ೨೩

ಆ ಪ್ರಸ್ತಾವದೊಳ್—

ಅನಿಲತನೂಜನ ಸಿಂಹ
ಧ್ವನಿಯಂ ಕೇಳ್ದಳ್ಕಿ ತತ್ಸರೋವರದೆರ್ದೆ ಪ
ವ್ವನೆ ಪಾಱುವಂತೆ ಪಾಱಿದು
ವನಾಕುಳಂ ಕೊಳದೊಳಿರ್ದ ತದ್ವಿಹಗಕುಳಂ ॥ ೨೪

ಅರೆಬೆಂದುವು ತಾವರೆ ಖಗ
ಮರೆಬೆಂದುವು ಭೀಮಕೋಪಶಿಖಿ ಮುಟ್ಟೆ ಸರೋ
ವರದ ಮಱಲ್ ಪುರಿಗಡಲೆಗೆ
ಪುರಿದ ಮಱಲ್ ಕಾಯ್ವು ತೆಱದೆ ಕಾಯ್ದತ್ತೆತ್ತಂ ॥ ೨೫

ಬಂದಂ ಬಕಾಂತಕಂ ಪೋ
ಕೊಂದಂ ಬಕವೆಸರ್ಗೆ ಮುನಿದು ನಮ್ಮುಮನಿನ್ನೆಂ
ಬಂದದೊಳೆ ಪಾಱಿ ಪೋದುವು
ನಿಂದಿರದುರವಣಿಸಿ ಬಕನಿಕಾಯಕಮದಱೊಳ್ ॥ ೨೬

ಕುಪಿತಮರುತ್ಸುತರವಕ
ಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾ
ವಿಪೊಡೆ ಜನಕ್ಕೆ ಕೊಳಂ ಕಿ
ೞ್ತು ಪಾಱುವಂತಾಯ್ತು ಕಮಲಜಾಂಡಂ ಬರೆಗಂ ॥ ೨೭

ಅಳುರ್ದು ಕೊಳೆ ಭೀಮಕೋಪಾ
ನಳನೆಸರ್ವೊಯ್ದಿಟ್ಟು ಜಲದವೊಲ್ ಮಱುಗಿದುದಾ
ಕೊಳದ ಜಲಮೆಯ್ದೆ ಕಾಯ್ದೆಸ
ರೊಳೆ ಕೂೞ್ ಕುದಿವಂತೆ ಕುದಿದುವನಿಮಿಷತತಿಗಳ್ ॥ ೨೮

ಅಂತು ಜಲಚರಜೀವರಾಶಿಗಳೆಲ್ಲವಸುಂಗೊಳೆ ಗೋೞುಂಡೆಗೊಳೆ ಕೂೞ್ಗುದಿಗೊಳೆ ಮಹೋತ್ತುಂಗಸಿಂಹಕೇತನಂ ಸಿಂಹನಾದಂಗೆಯ್ಯೆ—

ಆ ರವಮಂ ನಿರ್ಜಿತಕಂ
ಠೀವರವಮಂ ನಿರಸ್ತಘನರವಮಂ ಕೋ
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥ ೨೯

ಅಂತು ಬೆಮರ್ತುಮ್ಮಳಿಸಿ ಸ್ವೈರಿಸಲಾಱದೆ ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು—

ಸಲಿಲಸ್ತಂಭನವಿದ್ಯಾ
ಬಲಮನಪೇಕ್ಷಿಸಿದನೆನ್ನದುರಗಪತಾಕಂ
ಬಲಹಾನಿಯಾಗಿ ಕೊಳದೊಳ
ಗುಳಿದಿರ್ದಪನೆಂದು ನಗರೆ ಕೂರದರೆನ್ನಂ ॥ ೩೦

ಶಲ್ಯಂ ಸತ್ತಿಂಬೞಿಯುಮ
ಖಲ್ಯಂ ಕೊಳದೊಳಗೆ ಪೊಕ್ಕು ಮೆಯ್ಗರೆದಯ್ ಚಿಃ
ಖಲ್ಯನೆನೆ ಬಾರ್ತೆಗೆಟ್ಟುದ
ಮೂಲ್ಯಯಶೋರತ್ನಮೆಂಬುದಂ ಮಾಡುವೆನೇ ॥ ೩೧

ತೃಣವಲ್ಲಘುಜೀವಿತರ
ಕ್ಷಣಾರ್ಥದಿಂ ಕುಲದ ಛಲದ ಚಾಗಮುನಾಂತುಂ
ಗುಣಹಾನಿಯಾಗಿ ಪುರುಷರ
ಗಣನೆಗೆ ವಂದೆನ್ನನಾನೆ ಲಘುಮಾಡುವೆನೇ ॥ ೩೨

ಮುನಿವಂ ಮೂದಲಿಸಿಯುಮಿ
ನ್ನೆನಿತಂ ಪೊಕ್ಕಿರ್ಪೆನೆಂದು ಚಿತ್ತಕ್ಷೋಭಂ
ತನಗಾಗೆ ಜಲಚರಕ್ಷೋ
ಭನಿನಾದಂ ಪೊಕ್ಕು ಪೊಣ್ಮೆ ವಿಬುಧಕ್ಷೋಭಂ ॥ ೩೩

ಆಗಳಾ ಜಲಸ್ತಂಭಮಂತ್ರಮೆಲ್ಲಮವಿನೀತನಪ್ಪ ರಾಜಪುತ್ರನೊಳಾಳೋಚಿಸಿದ ಮಂತ್ರದಂತೆ ಪರಿಣಾಮರಮಣೀಯಮಾಗದೆ ಕಿಡೆಯುಮಹಂಕಾರಂಗಿಡದೆ—

ನಿಜಮಕುಟಸ್ಫುರನ್ಮಣಿಗಣಚ್ಛವಿಯಿಂ ಸುರಚಾಪಲೀಲೆ ಪಂ
ಕಜವನದೊಳ್ ಮನಂಗೊಳಿಸೆ ತನ್ನಯ ಮೇಗೊಗೆದಿರ್ದ ನೀಲನೀ
ರಜವನದಿಂ ಕಱಂಗಿ ಕಮಲಾಕರದಿಂ ಪೊಱಮಟ್ಟನುನ್ನತೋ
ದ್ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನಂ ॥ ೩೪

ರಭಸೋನ್ನತಲಗ್ನತರಂ
ಗಭಂಗಮೂರುಗಳೊಳುತ್ತಮಾಂಗದೊಳೆತ್ತಂ
ಪ್ರಭವಿಸಿದುದು ಕೌರವನೂ
ರುಭಂಗಮಂ ಮಕುಟಭಂಗಮಂ ಸೂಚಿಪವೋಲ್ ॥ ೩೫

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋಮಧ್ಯದಿಂ ಸಾ
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟೆಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಲಾಲೋಲಕೀಲಾಕ್ಷಿವೊಲ್ ದ
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ
ಧಾರ್ತರಾಷ್ಟ್ರಂ ॥ ೩೬

ಅಂತು ನಿಜಭುಜಗದೆಯಂ ತೂಗುತ್ತುಮಿರ್ದ ದಂದಶೂಕಪತಾಕನ ಸೆರಗಿಲ್ಲದ ಮೆಯ್ಗಲಿತನಕ್ಕೆ ಮೆಚ್ಚಿ ತಲೆಯಂ ತೂಗಿ ನಿಜಭುಜಪ್ರತಾಪನಿರ್ಜಿತನಿಖಿಲಭೀಮಸೇನಂ ಭೀಮಸೇನಂ ಕೌರವನಿದಿರ್ಗೆ ವಂದು—

ನಿನ್ನನುಜನರುಣಜಲಮಂ
ಮುನ್ನಂ ತವೆ ಪೀರ್ದೊಡಂಜಿ ನೀಂ ಪುಗೆ ಕೊಳನಂ
ಬೆನ್ನನೆ ಬಂದಾತಂ ಶೌ
ರ್ಯೋನ್ನತನೀಯಿರ್ದನಲ್ತೆ ಕೌರವಮಲ್ಲಂ ॥ ೩೭

ಎಂದು ನೆಱನನುಂಟುಮಾಡಿ ಮೂದಲಿಸಿ ನುಡಿಯೆ ದುರ್ಯೋಧನನತಿ
ಕ್ರೋಧಾನಲನಾಗಿ—

ಯಮರಾಜಪ್ರಿಯಸೂನುಗಂ ನಿನಗಮಾ ಗಾಂಡೀವಧನ್ವಂಗಮಾ
ಯಮಳರ್ಗಂ ಪ್ರಿಯೆಯಪ್ಪ ಕೃಷ್ಣೆಯ ಕಚಪ್ರಾರಂಭಮಂ ಬಾಹುವಿ
ಕ್ರಮಿ ದುಶ್ಶಾಸನನಂದು ಮುಂದೆ ತೆಗೆವಂದೆಲ್ಲಿರ್ದಯೀ ಗಂಡಗ
ರ್ವಮುಮಂದೆಲ್ಲಿಗೆ ಪೋಯ್ತು ಷಂಡ ನಿನಗಿಂದೀ ಗಂಡನಾರ್
ಮಾಡಿದರ್ ॥ ೩೮

ಅನಿಲಾತ್ಮಜ ನಿಮ್ಮಯ್ವರ
ವನಿತೆಯನಂದೊರ್ವ ತಂದನಲ್ಲಿಂ ದುಶ್ಶಾ
ಸನನೆೞೆದುಕೊಂಡು ಬರಲೆಂ
ದೆನಗಖಿಳಾವನಿಯ ಲಕ್ಷ್ಮಿಯಂ ಕೀರ್ತಿಯುಮಂ ॥ ೩೯

ಅಸುರಂ ವಸುಧಾತಳಮಂ
ರಸಾತಳಕ್ಕುಯ್ಯೆ ಹರಿ ತರಲ್ ಪೊಕ್ಕವೊಲೀ
ವಸುಮತಿಯನೆತ್ತಿ ನಿನ್ನಯ
ದೆಸೆಯಿಂ ತರೆ ಪೊಕ್ಕೆನಂಜಿ ಪೊಕ್ಕೆನೆ ಕೊಳನಂ ॥ ೪೦

ನಾಟ್ಕುಡೆಗಳೆದುಱೆ ಬೇರಂ
ಬಿಟ್ಕೆಯುಮಂ ತಿಂದು ವನದೊಳಡಗಿರೆ ನೀಮುಂ
ಮಿಟ್ಕುರಿಸಿ ನಿಂದುಮೀಗಳ್
ಪೇೞ್ ಕಮ್ಮೈಸುವರೆ ಬಿರುದುಮಂ ಬೀರಮುಮಂ ॥ ೪೧

ಪುಟ್ಟಂ ಸಟ್ಟುಗಮುಂ ಕೊಂ
ಡಟ್ಟಾಱಿಸಿ ಬೋನಮಿಟ್ಟು ಬಂದೆಯೊ ಗದೆಗೊಂ
ಡೊಟ್ಟೈಸಿ ಕಾದುವಂತುಟು
ತೊಟ್ಟನೆ ಕೊಳೆ ನಿನಗೆ ಗಂಡಗರ್ವಮುಮಾಯ್ತೇ ॥ ೪೨

ಎಸರನಿಡುವಕ್ಕಿಗರ್ಚುವ
ಬೆಸನುಂ ಕಯ್ಗಿೞಿವ ಕಂಚುಗರ್ಚುವ ಬೆಸನುಂ
ಬೆಸನಕ್ಕುಂ ಮತ್ಸ್ಯನ ಬಾ
ಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ ॥ ೪೩

ಎಂದು ಮುಟ್ಟೆ ಮೂದಲಿಸಿ ನುಡಿಯೆ ಭೀಮಸೇನಂ ಮುಗುಳ್ನಗೆ ನಕ್ಕು—

ಪಿರಿಯಣ್ಣನ ನನ್ನಿಯನಾ
ದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದೆಂ
ಕುರುವಂಶಜ ಕೇಳ್ ನಿನ್ನೀ
ಶರೀರಮಾಂಸದೊಳೆ ಮರುಳ್ಗೆ ಬಾಣಸುಗೆಯ್ವೆಂ ॥ ೪೪

ನೆನೆ ಚಿತ್ರಾಂಗದನಿಂದಮಂದು ನಿನಗಾದಾಪತ್ತನಾ ಬನ್ನಮಂ
ನೆನೆ ನೀಂ ಗೋಗ್ರಹಣಪ್ರಪಂಚದೊಳೆ ಮೆಯ್ವೆತ್ತಿರ್ದುದಂ ನಿನ್ನ ತ
ಮ್ಮನ ಕೆನ್ನೆತ್ತರನೀಂಟುವಲ್ಲಿ ಭಯದಿಂದಳ್ಕುತ್ತೆ ಬೆನ್ನಿತ್ತುದಂ
ನೆನೆ ಪಿಂತಿಕ್ಕಿದ ನಿನ್ನ ಮುನ್ನಿನ ಕವಲ್ಬನ್ನಂಗಳಂ ಕೌರವಾ ॥ ೪೫

ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತಗುಪ್ತಾನ್ನದಿಂ
ಕೃತಕದ್ಯೂತವಿನೋದದಿಂ ದ್ರುಪದಜಾಕೇಶಾಂಬರಾಕೃಷ್ಟಿಯಿಂ
ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್
ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತಂತ್ಯಕಾಲಂ ಗಡಾ ॥ ೪೬

೩

## ಜನ್ನ : ' ಅಮೃತಮತಿ — ಅಷ್ಟವಂಕ '

ಆ ಕಥೆ ಮತ್ತೆಂತೆಂದೊಡೆ
ಳಾಕಾಂತೆಗವಂತಿವಿಷಯಮಾಸ್ಯದವೊಲ್ ಶೋ
ಭಾಕರಮಾಯ್ತದಱೊಳ್ ನಾ
ನಾಕುಟ್ಮಳದಂತೆ ಮೆಱೆವುದುಜ್ಜೇನಿಪುರಂ ॥ ೧

ಆ ಪುರದರಸಂ ನತಭೂ
ಮೀಪಾಲರ ಮಕುಟಮಸ್ತಕದೆ ನಿಜತೇಜೋ
ರೂಪಕಮೆ ಪದ್ಮರಾಗದ
ದೀಪದವೊಲ್ ಮೆಱೆವಿನಂ ಯಶೌಘಂ ಮೆಱೆವಂ ॥ ೨

ದೊರೆವಡೆದ ಯಶೌಘನ ಭೂ
ವರತಿಳಕನ ಕಣ್ಗಳಂಗರಕ್ಕರ್ ಮನಮಾ
ಭರಣಂ ರಾಜ್ಯಶ್ರೀ ಸಹ
ಚರಿಯೆನೆ ಸಂದತ್ತು ಚಂದ್ರಮತಿಗರಸಿತನಂ ॥ ೩

ಅನಿತೆಸೆವ ಚಂದ್ರಮತಿಗಂ
ಜನಪತಿಗಂ ಪುಟ್ಟಿದಂ ಯಶೋಧರನೆಂಬಂ
ಜನಮೋಹನಬಾಣಂ ಕ
ರ್ಬಿನ ಬಿಲ್ಗಂ ನನೆಯ ನಾರಿಗಂ ಪುಟ್ಟಿದವೊಲ್ ॥ ೪

ನೋಡುವ ಕಣ್ಗಳ ಸಿರಿ ಮಾ
ತಾಡುವ ಬಾಯ್ಗಳ ರಸಾಯನಂ ಸಂತಸದಿಂ
ಕೂಡುವ ತೋಳ್ಗಳ ಪುಣ್ಯಂ
ನಾಡಾಡಿಯೆ ರೂಪು ಕುವರವಿದ್ಯಾಧರನಾ ॥ ೫

ಎಳವೆಳ್ದಿಂಗಳ್ ನನೆಗಣೆ
ಮಳಯಾನಿಳನಿಲ್ಲಿ ಮೂವರೊಳಗಾರೊ ಕುತೂ
ಹಳಮಾದಪುದೆನ್ನದ ಕ
ಣ್ಗೊಳವೆ ಯಶೋಧರಕುಮಾರನಂ ಕಾಣಲೊಡಂ ॥ ೬

ಅಮೃತಮತಿ ಗಡ ಯಶೋಧರ
ನ ಮನಃಪ್ರಿಯೆ ಆಕೆ ದೀವಮಾಗೆ ಪುಳಿಂದಂ
ಸುಮನೋಬಾಣಂ ತದ್ಭೂ
ರಮಣನನೊಲಿದಂತೆ ಗೋರಿಗೊಳಿಸುತ್ತಿರ್ಕುಂ ॥ ೭

ನರೆಯೆಂಬ ಹೊಱಸು ಮೊಗಮಂ
ಬರಮನೆಯಂ ಪೊಕ್ಕೊಡಂಗನಾಲೋಕನಮಂ
ಬರಸೆಂತಿರ್ದಪನೆಂದಾ
ನರನಾಥಂ ತೊಱೆದನಖಿಳವಿಷಯಾಮಿಷಮಂ ॥ ೮

ಧರಣೀಭಾರಕ್ಕೆ ಯಶೋ
ಧರನನೊಡಂಬಡಿಸಿ ನೂರ್ವರರಸುಗಳೊಡನಾ
ದರದಿಂ ಕಂಬಂದಪ್ಪಿದ
ಕರಿಯಂತೆ ತಪೋವನಕ್ಕೆ ನಡೆದನಿಳೇಶಂ ॥ ೯

ಅಳವಡೆ ಭುಜದೊಳ್ ಮೃಗಮದ
ತಿಳಕದವೊಲ್ ಸಕಲಧರಣಿ ಯೌವನಭೂಷಾ
ವಳಿಯೆನೆ ತಿರ್ದುವನಾ ನೃಪ
ಕುಲಶೇಖರನಮೃತಮತಿಯ ಮುಖದರ್ಪಣದೊಳ್ ॥ ೧೦

ಅವನಿಪನೊರ್ಮೆ ಸಭಾಮಣಿ
ಭವನದಿನಂಬರತರಂಗಿಣೀಪುಳಿನಮನೇ
ಱುವ ಹಂಸನಂತೆ ಶಯ್ಯಾ
ಧವಳಪ್ರಾಸಾದತಳಮನೇಱಿದನರಸಾ ॥ ೧೧

ಅಮೃತಮತಿಸಹಿತಮಾ ಚಂ
ದ್ರಮತಿಯ ಸುತನಂತು ಮೆಱೆವ ದವಳಾರದೊಳ
ಭ್ರಮುವೆರಸಭ್ರಗಜಂ ವಿ
ಭ್ರಮದಿಂದಂ ಸಜ್ಜರಕ್ಕೆ ಬಂದವೊಲೆಸೆಗುಂ ॥ ೧೨

ಹೃದಯಪ್ರಿಯರಂತೊಱಗಿದ
ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮು
ಟ್ಟಿದ ಪೊತ್ತು ಸೂಟ್ಗಿ ಕರುಮಾ
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ॥ ೧೩

ಬಿನದಕೆ ಪಾಡುತ್ತಿರೆ ನು
ಣ್ಪನಿ ನಿದ್ರೆಗೆ ಕತಕಬೀಜಮಾಯ್ತೆನೆ ಮೃಗಲೋ
ಚನೆ ತಿಳಿದಾಲಿಸಿ ಮುಟ್ಟಿದ
ಮನಮಂ ತೊಟ್ಟನೆ ಪಸಾಯದಾನಂಗೊಟ್ಟಳ್ ॥ ೧೪

ಅಂತೆಸೆಯೆ ಪಾಡುತಿರೆ ತ
ದ್ದಂತಿಪನತಿನೂತ್ನಗೀತಪಾತನ ವಿಕಲ
ಸ್ವಾಂತೆಗೆ ನೋಡುವ ಕೂಡುವ
ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ ॥ ೧೫

ಮನದನ್ನಳಪ್ಪ ಕೆಳದಿಗೆ
ಮನಮಂ ಮುಂದಿಟ್ಟು ಬೞಿಕ ಕೞಿಪಿದೊಡವಳಾ
ತನ ರೂಪುಗಂಡು ಕಣ್ಗಂ
ಮನಕ್ಕಮುದ್ಗಾರಪೆತ್ತು ಭೋಂಕನೆ ಮಗುಳ್ವಳ್ ॥ ೧೬

ಅಮೃತಮತಿಯೆತ್ತ ರೂಪಾ
ಧಮನಷ್ಟಾವಂಕನೆತ್ತ ಚಿತ್ರಮಪಾತ್ರೇ
ರಮತೇ ನಾರೀ ಎಂಬುದು
ಸಮನಿಸಿದುದು ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ ॥ ೧೭

ಎನುತುಂ ಬಂದು ವಿಷಣ್ಣಾ
ನನೆಯುಂ ಮಾರ್ಗಾವಲಗ್ನನೇತ್ರೆಯನುಚ್ಛ್ವಾ
ಸನಿತಪ್ತಾಧರರುಚಿಯುಂ
ಮನುಜೇಂದ್ರಾಂಗನೆಯನೆಯ್ದೆ ಕಂಡಿಂತೆಂದಳ್ ॥ ೧೮

ಕಂತುವಿನ ಕಯ್ಯ ಕೂರಸಿ
ಯಂತಿರೆ ಗರಗರಿಕೆವಡೆದು ಪೊಳೆವಸಿಯಳೆ ನೀನ್
ಇಂತಪ್ಪ ಕಾಮದೇವಂ
ಗೆಂತೆಂತಾಯ್ದುೞಿಸಿ ಕೂರ್ತೆಯೆಂದಾನಱಿಯೆಂ ॥ ೧೯

ಈ ದೊರೆಯನೆಂದು ತೋಱಲ್
ಮೇದಿನಿಯೊಳಗಾತನಲ್ಲದಿಲ್ಲೆನೆ ಪೇೞ್ ಪೇೞ್
ಕಾದಲನಂತಿರೆ ಚೆಲ್ವನೆ
ದೂದವಿ ನೀನೆನ್ನ ಕೊಂದೆಯೆಂದೊಡೆ ಪೇೞ್ದಳ್ ॥ ೨೦

ಪಱಿದಲೆ ಕುೞಿನೊಸಲಬೞಿಗ
ಣ್ಣೊಱೆವಾಯ್ ಹಪ್ಪಳಿಕೆಮೂಗು ಮುರುಟಿದ ಕಿವಿ ಬಿ
ಬ್ಬಿಱುವಲ್ ಕುಸಿಗೊರಲಿೞಿದೆರ್ದೆ
ಪೊಱಂಟ ಬೆನ್ ಬಾತ ಬಸಿಱಡಂಗಿದ ಜಘನಂ ॥ ೨೧

ಕಱಿದೊವಲ ಪಱಿಯ ಕುೞಿಯಂ
ತೆಱೆದಂದದ ಮೆಯ್ಯ್ಯನಾತ್ರಮಾತ್ರನ ಕಯ್ಗಳ್
ಕುಱುಗಣ್ಣ್ ಕೂನಬೆನ್ ಕಾಲ್
ಮಱೆಯಿಸುವುದು ಟೊಂಕ ಮುಱಿದ ಕತ್ತೆಯ ಕಾಲಂ ॥ ೨೨

ಎಂದೊಡೆ ದೂದವಿಗವಳಿಂ
ತೆಂದಳ್ ಗರಗರಿಕೆ ಕೊರಲೊಳೀಕ್ಷಣದೊಳ್ ವಾ-
ರ್ಬಿಂದು ಮಿಡುಕೆರ್ದೆಯೊಳೊದವೆ ಪು
ಳಿಂದನ ಕಣೆಗಟ್ಟಿ ನಿಂದ ವನಹರಿಣಿಯವೊಲ್ ॥ ೨೩

ಕರಿದಾದೊಡೆ ಕತ್ತುರಿಯುಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸ್ಮರಚಾಪಮನಿಳಿಕೆಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ॥ ೨೪

ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ
ಫಲಮೇನಿಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ || ೨೫

ಎಂದಾಕೆಗೆ ಲಂಚಮನಿ
ತ್ತೆಂದುದನೆಂದೆರವಿಗೊಂಡು ಕೞುಪುವುದುಮವಳ್
ಸಂದಿಸಿದೊಡಮೃತಮತಿ ರಾ
ತ್ರಿಂದಿವಮಾತನೊಳೆ ಸಲಿಸಿದಳ್ ತೆಱಪುಗಳಂ || ೨೬

ಆ ವಿಕಟಾಂಗನೊಳಂತಾ
ದೇವಿಗೆ ರುಚಿಯಾಗೆ ರತಿಫಲಾಸ್ವಾದನದೊಳ್
ಬೇವಂ ಮೆಚ್ಚಿದ ಕಾಗೆಗೆ
ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ || ೨೭

ನೋಡುವ ಮಾತಾಡುವ ಬಾಯ್
ಗೂಡುವ ಪದನಮೃತಮತಿಗೆ ಪೂರ್ವಸ್ಥಿತಿಯಿಂ
ಪಾಡೞಿಯುತ್ತಿರೆ ನೋಡ
ಲ್ವೇಡಿ ಯಶೋಧರನದೊರ್ಮೆ ಶಯ್ಯಾತಳದೊಳ್ || ೨೮

ಮಱೆದೊಱಗಿದನಂತೆವೊಲಿರೆ
ಪಱಮೆ ಪಗಲ್ ಮುಗಿಯೆ ಸಿಲ್ಕಿ ಕೈರವದಿನಿರುಳ್
ಪೊಱಮಡುವಂತರಸನ ತೋ
ಳ್ಸೆಱೆಯಿಂ ನುಸುಳ್ದರಸಿ ಜಾರನಲ್ಲಿಗೆ ಪೋದಳ್ || ೨೯

ಬೆನ್ನೊಳೆ ಪೋದಂ ದೋಷದ
ಬೆನ್ನೊಳೆ ಸಂದಿಸುವ ದಂಡದಂತರಸಂ ಪ್ರ
ಚ್ಛನ್ನದಿನುರ್ಚಿದ ಬಾಳ್ವೆರ
ಸನ್ನೆಗಮಾ ಬದಗನರಸಿ ತಡೆದೊಡೆ ಮುಳಿದಂ ‖ ೩೦

ಮುಳಿದಾಕೆ ತಂದ ಮಾಲಾ
ಮಳಯುಜ ತಾಂಬೂಲಜಾಲಮಂ ಕೆದಱೆ ಕುರು
ಳ್ಗಳನೆಟಿದು ಬೆನ್ನ ಮಿಳಿಯಿಂ
ಕಳಹಂಸೆಗೆ ಗಿಡಿಗನೆಱಗಿದಂತಿರೆ ಬಡಿದಂ ‖ ೩೧

ತೋರಮುಡಿವಿಡಿದು ಕುಡಿಯಂ
ನಾರಂ ತದೆವಂತೆ ತದೆದು ಬೀಟೆಯ ಕಾಲಿಂ
ಬಾರೇಟೆ ಬದಗನೊದೆದೊಡೆ
ಕೇರೆ ಪೊರಳ್ವಂತೆ ಕಾಲಮೇಲೆ ಪೊರಳ್ದಳ್ ‖ ೩೨

ತಡವಾದುದುಂಟು ನಲ್ಲನೆ
ಬಡಿ ಮುಳಿಯದಿರರಸನೆಂಬ ಪಾತಕನೆನ್ನಂ
ತೊಡೆಯೆಃಱಿಸಿ ಕೇಳಿಕೆಯಾ
ದೊಡೆ ನೋಡುತ್ತಿರ್ದೆನುಂತೆ ನಿಲಲಣ್ಮಿವೆನೇ ‖ ೩೩

ಕಿವಿಸವಿ ದನಿ ಕಣ್ಸವಿ ರೂ
ಪವಧರಿಸೆಲೆ ಗಜವೆಡಂಗ ನೀನುಟೀದೊಡೆ ಸಾ
ವವಳೆನಗೆ ಮಿಕ್ಕ ಗಂಡರ್
ಸವಸೋದರರೆಂದು ತಿಳಿಪಿದಳ್ ನಂಬುಗೆಯಂ ‖ ೩೪

ಆಗಳ್ ಬಾೞ್ ನಿಮಿರ್ದುದು ತೋಳ್
ತೂಗಿದುದು ಮನಂ ಕನಲ್ದುದಿರ್ವರುಮನೆರ
ಲ್ವಾಗಂ ಮಾಡಲ್ ಧೃತಿ ಬಂ
ದಾಗಳ್ ಮಾಣೆಂಬ ತೆಱದೆ ಪೇಸಿದನರಸಂ ॥ ೩೫

ಪರನೃಪರನಲ್ಲದೀ ಪುೞು
ಕರನಿಱಿವುದೆ ಮದ್ಭುಜಾಸಿಯಿದು ಕಯ್ಯಿಕ್ಕಲ್
ಕರಿ ಕರಿಗಲ್ಲದಿಱುಂಪೆಗೆ
ಪರಿವುದೆ ಹರಿ ಕರಿಯನಲ್ಲದಿಱಿವುದೆ ನರಿಯಂ ॥ ೩೬

ಅಸಿಲತೆ ರಣಧೌತಮದಿ
ಮಸಿಮುಸುಡನ ಜೀವಕಪ್ಪಿನಿಂ ಕಂದಿದೊಡೆ
ಣ್ದೆಸೆಯನಡರ್ದೆನ್ನ ಕೀರ್ತಿ
ಪ್ರಸರದ ಕುಡಿ ಕಯ್ಪೆನೊರೆಯ ಕುಡಿಯವೊಲಕ್ಕುಂ ॥ ೩೭

ಅೞಿವುಳ್ಳೊಡೆ ನೋಡಿಱಿದೊಡ
ನೞಿವುದೆ ಪೆಣ್ ತಪ್ಪಿ ನಡೆಯೆ ಚಿಃ ಕಿಸುಗುಳಮೆಂ
ದುೞಿವುದೆ ಗೆಲ್ಲಂ ಕೊಂದಾ
ಪುೞು ಪುಟ್ಟುವ ನರಕದೊಳಗೆ ಬೀೞ್ವನೆ ಚದುರಂ ॥ ೩೮

ಎಂದು ನೆನೆದಿಱಿಯಲೊಲ್ಲದೆ
ಬಂದರಸಂ ಮುನ್ನಿನಂತೆ ಪವಡಿಸೆ ತಾನುಂ
ಬಂದು ಮಱೆದರಸನೊಱಗಿದ
ನೆಂದೊಯ್ಯನೆ ಸಾರ್ದ ಪೆಱಗೆ ಪಟ್ಟಪಾರ್ಗಳ್ ॥ ೩೯

ಬದಗುಳಿಗನ ತೋಳ್ ಮುಟ್ಟಿದ
ಸುದತಿಯೊಳಿಂಪಾಗದಂತೆ ಕೆಟ್ಟುದು ಪುಳಿ ಮು
ಟ್ಟಿದ ದುಗ್ಧದಂತೆ ನೀರ್ ಮು
ಟ್ಟಿದ ಜೇನೆಯ್ಯಂತೆ ಪತಿಗೆ ಶಯ್ಯಾತಳದೊಳ್ ॥ ೪೦

ಆ ರಾಜಕುಮಾರಂ ಬಱಿ
ಕಾ ರೂಪಿನ ಪೆಂಡಿರಿಂತು ಕಱಿಪಾದೊಡೆ ಱಿ
ಕೂರಿಸುವ ಕೂರ್ಪ ಮಾತಂ
ಮಾರಿಗೆ ಕುಡು ಸಿರಿಯನೊಟ್ಟು ಸುಡು ಹೋಗೆಂದಂ ॥ ೪೧

ಒಲಿಸಿದ ಪೆಣ್ ಪೆಱರೊಳ್ ಸಂ
ಚಲಿಸಿದೊಡಿದು ಸುಖಮೆ ಪರಮಸುಖಸಂಪದಮಂ
ಸಲಿಸಿ ಸಲೆ ನೆರೆವ ಮುಕ್ತಿಯ
ನೊಲಿಸುವೆನಿನ್ನೊಲ್ಲೆನುಱಿದ ಪೆಂಡಿರ ನಣ್ಪಂ ॥ ೪೨

ಎಂದಿಂತು ಬಹು ವಿಕಲ್ಪದ
ದಂದುಗದೊಳೆ ಬೆಳಗುಮಾಡಿ ಮೆಯ್ಮುರಿದೆರ್ದಂ
ಬಂದು ತೊಡೆವೊಯ್ದು ಬೋಧಿಸಿ
ದಂದದಿನೆಸಗಿತ್ತು ಸುಪ್ರಭಾತಾತೋದ್ಯಂ ॥ ೪೩

೪

## ಚಾಮರಸ: 'ಮಾಯಾಕೋಲಾಹಲ'

ಹೂಡಿ ಹಣ್ಣಿದ ಜಗದ ಜಂತ್ರವ
ನಾಡಿಸುವ ಮಾಯಾಂಗನೆಯ ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ
ಆಡಿಸುವ ಮದ್ದಳೆಯ ಜೋಕೆಯ
ಜೋಡಿಸುವನಲ್ಲಮನು ಪಾತ್ರವ
ನಾಡುವವಳಾ ಮಾಯೆ ಲೋಕವ ಮರುಳುಮಾಡುತಲಿ ॥ ೧

ನೋಟವತ್ತಲು ಮನದ ಬೆಸುಗೆಯ
ಬೇಟವಿತ್ತಲು ಕಾಯ ಕರಣಗ
ಳಾಟವತ್ತಲುವಂತರಂಗದ ಬಯಕೆಗಳ ಬಗೆಯ
ಕೂಟವಿತ್ತಲು ಕವಲುಗೊಂಡುದು
ನಾಟಿ ಲಿಂಗದೊಳಲ್ಲಮನೊಳದು
ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯೆಯಲಿ ॥ ೨

ಲಲಿತ ನಿರ್ಮಲ ಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ
ತಿಳಿಯಲಱಿಯದ ಜನಕೆ ಮಾಯೆಯ
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ ॥ ೩

ಶೂಲಿಯೊಳು ತಾ ಹೂಣಿಸಿದ ಹೀ
ಹಾಳಿಯನು ಮಱುಕಳಿಸಿ ಕಾಮನ
ದಾಳಿಯಲಿ ತಾ ಸಿಕ್ಕಿದುದ ನೆಱೆ ನೆನೆವ ವೇದೆಯಲಿ
ತಾಳಮೇಳದ ಗತಿಯ ಗಮಕದ
ಕೀಲಣೆಯ ಕಾಲಾಟ ವಿಘಟಿಸಿ
ಚಾಳಿಯಲಿ ತಬ್ಬಿಬ್ಬುವೋಗುತಲಿರ್ದಳಾ ಮಾಯೆ ॥ ೪

ಈತನೇ ದಿಟದಲ್ಲಮನೊ ಮೋ
ಣೀತ ಮದ್ದಳೆಯಲ್ಲಮನೊ ನಾ
ನೀ ತರುಣಿಗೀತನನು ತೋಱಿಸಿ ತಿಳಿಯಬೇಕೆನುತ
ಪ್ರೀತಿಯಿಂದಲಿ ತನ್ನ ಮನದೊಂ
ದಾತುರತೆಯನು ಸೈರಿಸುತ ಬಳಿ
ಕೋತು ಮಿಗೆ ತನ್ನೊಳಗೆ ತಾನಿಂತೆಂದಳಾ ಮಾಯೆ ॥ ೫

ಸಂದಣಿಸುತಿಟ್ಟಣಿಸಿ ನೆಱೆದಿಹ
ಮಂದಿಯಲಿ ನಾನಿವನನನುಚಿತ
ದಿಂದಲಿವಳಿಗೆ ನುಡಿದು ತೋಱುವುದೆಗ್ಗತನವೆನುತ
ಅಂದು ವಿಮಳೆಗೆ ಜಾತಿಜಾಣಿಕೆ
ಯಿಂದಲಭಿನವ ಪಾಡು ನೋಟಗ
ಳಿಂದ ಬಳಿಕಲ್ಲಮನ ತೋಱಿಸುತಿರ್ದಳಾ ಮಾಯೆ ॥ ೬

ಆಕೆ ಕಡೆಗಣ್ಣಿನಲಿ ತೋಱಿದ
ಡೀಕೆ ನಡುಗಣ್ಣಿನಲಿ ನೋಡುತ
ವಾ ಕಳಾವಿದನಾಗಿ ಕಾಣಿಸುವಾತನಿಂಗಿತವ
ಲೋಕದೊಳಗಿಂತಪ್ಪ ಮಾನವ
ರಾಕೃತಿಯ ನಾ ಕಾಣೆನೆನುತಾ
ಲೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ ॥ ೭

ಊಹಿಸುವೊಡಾ ದೇವ ಮಾನವ
ಜೋಹವನು ತೊಟ್ಟಿರ್ದನೋ ಮೇಣ್
ಮೋಹದಿಂದಾವೀಕ್ಷಿಸಲು ದಿಟವೆಮ್ಮ ಕಣ್ಣಿಂಗೆ
ರೂಹಿನಂದದೊಳಿರ್ದನೋ ಸಂ
ದೇಹವಾಗಿದೆ ತಿಳಿವೊಡೀತನ
ಗಾಹು ನಮಗರಿದಾದುದೆಂದಳು ವಿಮಳೆ ಮನದೊಳಗೆ ॥ ೮

ತುಡುಕಿ ವಂದಿಸಿ ನೋಡಲಳುಪಿನ
ತೊಡಕು ತೊಲಗಿಸಿ ಬಳಿಕಲೀತನ
ಬೆಡಗು ಬಿನ್ನಾಣವನು ಕಾಣಲಿಬಹುದು ನಾವೆನುತ
ನುಡಿದು ತೋಱದೆ ಕಣ್ಣ ಕಾಂತಿಯು
ಕಡೆಗಳಲಿ ಕಾಣಿಸುತಲಿರ್ದಳು
ಮಡದಿ ಮಾಯೆಗೆಯಲ್ಲಮನ ವರಮೂರ್ತಿಯನು ವಿಮಳೆ ॥ ೯

ಕಂಗಳಲಿ ಮಾತುಗಳು ತಿಳಿವೊಡೆ
ಕಂಗಳಲಿ ಮಾಟಗಳು ಬಗೆವೊಡೆ
ಕಂಗಳಲಿ ಸಮ್ಮೋಹಗಳು ಕಂಗಳಲಿ ನೇಹಗಳು
ಕಂಗಳಲಿ ಸರ್ವಪ್ರಪಂಚುಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ ॥ ೧೦

ಬಳಿಕಲೊಯ್ಯನೆ ಬಱಿಯ ಬೇಟದ
ಬಳಕೆ ಬಳಲಿತು ತನ್ನ ಪೈಜೆಯು
ನೆಳಲು ನೆಲಸಿತು ಹೇವ ಹೆಚ್ಚಿತು ಕಾಂಕ್ಷೆ ಕವಲಾಯ್ತು
ತಿಳಿವು ತಿರುಗಿತು ಲಾಸ್ಯಲೀಲೆಯ
ಚಳತೆ ಚಂಡಿಸಿ ಹಿಂಗಿಹೋಯಿತು
ಹೊಳೆದುದಲ್ಲಮನಳಬಳವನಱಿವಾಸೆ ಮಾಯೆಯಲಿ ॥ ೧೧

ಮುರಿದುದಾ ಮನವದಱ ಸಂಗಡ
ಮುರಿದುದಾ ನಸುನೋಟವಾಗಳೆ
ಮುರಿದುದಾ ಮುಖ ಮುತ್ತಿನೋಲೆಯ ಬೆಳಗ ಪಸರಿಸುತ
ತಿರುಗಿ ತೀವಿತು ಲಾಸ್ಯ ಮಧುಕೇ
ಶ್ವರನ ಸಮ್ಮುಖದಿಂದಲೊಯ್ಯನೆ
ಸರಿಸಗೊಂಡಿತು ಮತ್ತೆ ಮಾಯೆಯ ಮಾಟವಲ್ಲಮನ ‖ ೧೨

ನೋಟವೆಸೆದುದು ಮನ್ನ ಮುಟ್ಟದ
ಬೇಟವಲ್ಲದೆ ಬೇಱೆ ಬುದ್ಧಿಯ
ಕೂಟದಿಂದ ಲತಾಂಗ ಲಂಬಿಸಿತಾನತಸ್ಥಿತಿಯ
ನಾಟಿ ನಲಿದುದು ಚಿತ್ತವೀ ನಟ
ನಾಟಕನ ಸಿಕ್ಕಿಸುವ ಬಗೆಯಲಿ
ಮಾಟ ಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ ‖ ೧೩

ಈಕೆಯಂಗವನಱಿದು ನಾವಿ
ನ್ನೇಕೆ ಸದಮಲ ಸಸ್ವರೂಪವ
ಕಾಕರಿಗೆ ಕಾಣಿಸುವುದನುಚಿತವೆನುತ ತನ್ನೊಳಗೆ
ಸಾಕೆನುತ ನಟ್ಟುವಿಗತನವನು
ನೂಕುತಲಿ ಮದ್ದಳೆಯ ತಾನೊಡ
ಹಾಕಿ ನಗುತಲಿ ಹೋದನಲ್ಲಮನಖಿಳಜಗವಱಿಯೆ ‖ ೧೪

ಹೊಸತಿದೇನಿದ್ದದ್ದು ಸುಮ್ಮನೆ
ಗಸಣೆಯಿಲ್ಲದಿದೇಕೆಯಲ್ಲಮ
ಬಿಸುಟುಹೋದನು ಮದ್ದಳೆಯನೆಂದೆನುತಲಲ್ಲಿರ್ದ
ಶಶಿಮುಖಿಯರಾ ಮೇಳದವರಾ
ಮುಸುಱಿ ನೋಡುವ ನೋಟಕರು ಕಾ
ಣಿಸದ ಕಾರ್ಯಕೆ ಬೆಗಡುಗೊಂಡರು ಕೂಡೆ ತಮತಮಗೆ ‖ ೧೫

ಆಯಿತೇ ಕಡೆಯಾಟ ಹೂಣಿಕೆ
ಹೋಯಿತೇ ಹುಸಿಯಾಗಿ ಕಾಮನ
ಬಾಯ ಬಾರಿಗೆ ಬಿದ್ದೆನೇ ನಗುವವರಿಗೆಡೆಯಾಗಿ
ಹಾಯೆನುತ ಹಮ್ಮೈಸಿ ಹಲುಬುತ
ಬಾಯ ಬಿಡುತಲಿ ಮಱುಗುತಿರ್ದಳು
ಮಾಯೆ ಮಾಣದೆಯಲ್ಲಮಪ್ರಭುರಾಯನಗಲಿದರೆ ॥ ೧೬

ಬಾಲೆ ಹಂಬಲಿಸಿದೊಡೆ ಫಲವೇ
ನೇಳು ತಡೆದಿರದಲ್ಲಮನ ನೀ
ರೇಳು ಲೋಕದಲಱಸಿ ನೋಡುವೆನೆನುತಲಾ ವಿಮಳೆ
ಹೇಳಿದೊಡೆಯಹುದೆನುತ ಚಿತ್ತವ
ತಾಳಿ ತರಹರಗೊಂಡು ಬಳಿಕಲಿ
ಕಾಲುನಡೆಯಲಿ ಮಾಯೆ ನಡೆದಳು ಕೆಳದಿಯರು ಸಹಿತ ॥ ೧೭

ನೆರೆದು ನೆಱೆ ಬೆಱಗಾಗಿ ನೋಡಿರೆ
ಧರಣಿಪತಿಯ ಕುಮಾರಿ ಕಾಮಾ
ತುರದಲಲ್ಲಮನೆಂಬ ಮದ್ದಳೆಗಂಗೆ ಮನಸೋತು
ಮರುಳುಗೊಂಡಕಟವನ ಬೆನ್ನಲಿ
ಹರಿದು ಹೋಗುತಲಿಹಳೆಯೆನುತಲಿ
ಪುರದೊಳಗೆ ನೋಟಕರು ಸಂದಣಿಸಿದರು ಬೀದಿಯಲಿ ॥ ೧೮

ಹೋಗುತಿರ್ದಳು ಹೊಲಬ ಕೇಳುತ
ಬೇಗ ಬೇಗದಲಲ್ಲಮನನಾ
ವಾಗ ಕಾಬೆವೊ ಎಂಬ ಮನದಾತುರದ ತವಕದಲಿ
ಆಗಲಡವಿಯ ಬಿದ್ದು ನೆಱೆ ಭೂ
ಭಾಗದಲಿ ವನಚರಿಯರೆಂಬವೊ
ಲಾಗಿ ಮಾಯಾದೇವಿ ವಿಮಳೆ ಸಮಸ್ತ ಸಖಿನಿವಹ ॥ ೧೯

ಬಿಸಿಲು ಸುಟ್ಟುರುಗಾಳಿ ದೆಸೆಗಳ
ಮುಸುಗುತಿಹ ಕೆಂದೂಳಿ ಕಾಳ್ಕಿ
ಚ್ಚೆಸೆವ ನಟ್ಟಡವಿಯಲಿ ನಡೆದೈತರುತ ಕಾಲೊಡೆದು
ಬಸವಳಿದು ಬೀಳುತ್ತಲೇಳುತ
ಹಸಿವು ತೃಷೆ ಬಳಲಿಕೆಗಳಲಿ ಧೂ
ಪಿಸುತ ಬಂದಳು ಮಾಯೆ ತಾನಲ್ಲಮನನರಸುತಲಿ ॥ ೨೦

ಸೂಡುತಲಿ ಬಿಡುಜೆಡೆಗಳನು ಕೈ
ಗೂಡುತಲಿ ಕಡವನ ವಿಭೂತಿಯ
ಗೂಡುಸಂವರಿಸುತ್ತ ಲಾಕುಳ ಯೋಗವಟ್ಟಿಗೆಯ
ಜೋಡಿಸುತ ಜಪ ತಪ ಸಮಾಧಿಯ
ಮಾಡುವವರಾ ಮಾಯೆ ಬರಲೆ
ದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ ॥ ೨೧

ಕರುಣಿಗಳ ಬಲ್ಲಹನು ಬೋಳೆಯ
ರರಸ ಭಜಕರ ಬಂಧುವೆನಿಸುವ
ಪರಮಪಾವನನಲ್ಲಮಪ್ರಭು ತಾನೆ ತನ್ನೊಳಗೆ
ವರ ತಪೋಧನರಂಜಿಕೆಯನಾ
ತರುಣಿಯರ ಬಳಲಿಕೆಯ ನಾನೇ
ಪರಿಹರಿಸಬೇಕೆನುತಲಾ ಕ್ಷಣ ಸುಳುಹು ತೋಱಿದನು ॥ ೨೨

ನಿಲಿಸಿ ಭಯ ಬೇಡೆಂದು ತಾಪಸ
ಕುಲಕೆಯಭಯವ ಕೊಟ್ಟು ಕರುಣದ
ಬಳಕೆಯಲಿ ತಾನವರಿಗೊಬ್ಬ ತಪಸ್ವಿಯಂದದಲಿ
ನಲಿದು ಹರಿತಹ ಮಾಯೆಯನು ಮೂ
ದಲಿಸಿ ಮುರಿದೋಡಿಸುವೆನೆನುತಲಿ
ಸುಳುಹುದೋಱಿದನಾಕೆಗಲ್ಲಮ ಮುನ್ನಿನಂದದಲಿ ॥ ೨೩

ತೃಷೆಗಳಱಿತುವು ಕಾಣುತಲಿ ಕಡು
ಪಸುಗಳಡಗಿದವಡವಿಯಲಿ ಕಂ
ಪಿಸುತ ಮುಗ್ಗುತ ಕೆಡೆವುತಲಿ ಮಿಗೆ ಬಂದ ಬಳಲಿಕೆಯು
ಮಸಕಮಾದುದು ವಿಶ್ರಮಿಸಿದರು
ಶಶಿಮುಖಿಯರೆಯ್ತಂದು ಕಾಣುತ
ಮುಸುಱಿ ಮುತ್ತಿದರಲ್ಲಮನ ಶ್ರೀಪಾದಪಂಕಜವ ॥ ೨೪

ಲೇಸುಮಾಡಿದೆಯಯ್ಯ ಮಾಯೆಯ
ನೀಸು ದಿನ ಮನವೊಲಿಸಿ ಕಡೆಯಲಿ
ಘಾಸಿಮಾಡುವದುಚಿತವೇ ನಿನಗೆನುತ ಕೆಳದಿಯರು
ಆ ಸದಾನಂದೈಕಮೂರ್ತಿ ವಿ
ಲಾಸಿಯಲ್ಲಮಲಿಂಗನಿದಿರಲಿ
ಸೂಸಿದರು ತಮ್ಮೊಡತಿಯಾಸಱುಬೇಸಱೆಲ್ಲವನು ॥ ೨೫

ಆರು ಮೊದಲಲಿ ಬಯಸಹೇಳಿದ
ರಾರು ಕಾಣುತ ಕರೆಸಹೇಳಿದ
ರಾರು ತನ್ನನು ಬಳಿಕುದಾಸಿಸಹೇಳಿದವರಾರು
ನಾರಿಯರಿಗಿದು ಸಹಜಸಂಚಲ
ಕಾರಣಿಕತನ ತನ್ನ ತಾನೇ
ದೂರಿಸಿದೊಡಾನೇನ ಮಾಡುವೆನೆಂದನಲ್ಲಮನು ॥ ೨೬

ಹೇಳಬಾರದು ನೀನು ಮಾಡಿದ
ಬೇಳುವೆಯ ಬೇಗೆಯನು ಲೋಗರ
ನಾಳವಾಡಿಯೆ ನುಡಿದೆಯಲ್ಲದೆ ನೀನು ಕುಹಕದಲಿ
ಕೇಳಿಲಲಿ ಬಾಯ್ವಿಟ್ಟು ಮಾಯೆಯ
ವೇಳೆಯನು ಕಾಯ್ದಿರ್ದು ಕಡೆಯಲಿ
ಕೀಳುಮಾಡಿಯೆ ನುಡಿದೆಯೆಂದರು ಸತಿಯರಲ್ಲಮನ ॥ ೨೭

ತಾನೆ ಕಂಗೆಟ್ಟಿರಲು ಕರುಣಿಸಿ
ನಾನು ಸುಳಿದರೆ ನನ್ನನಾರೆಂ
ದೇನುವನು ಭಾವಿಸದೆ ಬೆಬ್ಬನೆ ಬೆಱೆತಹಂಕರಿಸಿ
ತಾನೆ ತನ್ನ ವಿಕಾರದಿಂದಿರ
ಲೇನು ಮಾಡುವೆ ಬಳಿಕ ಸಾಕೆಂ
ದಾನು ಬಂದೆನು ಬಿಟ್ಟು ತಪ್ಪೇನೆಂದನಲ್ಲಮನು ॥ ೨೮

ಎಂದ ಮಾತನು ಕೇಳಿ ಕಡುಖತಿ
ಯಿಂದಲಹುದೈ ಧೂರ್ತ ನೀ ಗತಿ
ಯೆಂದು ನಂಬಿದೊಡೊಳ್ಳಿತಾಯಿತು ಬಳಿಕ ಮತ್ತೇನು
ಸಂದ ಸಟೆ ಕುತ್ಸಿತ ಕುಮಂತ್ರದ
ಬಂದಿಕಾಱನು ಚಾಟು ಚಪಳಿಗ
ನೆಂದು ನಾ ಮುಂದಱಿಯೆನೆಂದಳು ಮಾಯೆಯಲ್ಲಮನ ॥ ೨೯

ಕುಟಿಲ ಕುಚ್ಚಿತ ಧೂರ್ತ ದುರ್ಜನ
ವಟಮುಟಿಗತನ ಕಪಟ ಕಳವಳ
ಸಟೆ ವಿಕಾರಗಳಲ್ಲಮನವೋ ತಿಳಿಯೆ ಮಾಯೆಯವೋ
ದಿಟಕೆ ಬಲ್ಲ ವಿರಿಂಚಿ ಹರಿ ಸುರ
ಕಟಕ ವರಮುನಿ ಸಿದ್ಧ ಸಾಧಕ
ಪಟುಗಳೆಲ್ಲರ ಕೇಳಿ ನೋಡೆನುತಿರ್ದನಲ್ಲಮನು ॥ ೩೦

ಒಳ್ಳಿಯವರೈ ನೀನು ಕೋಱಿದ
ರೆಲ್ಲರೆನ್ನಾಧೀನ ಪಕ್ಷದ
ಬಲ್ಲಿದರು ಕೇಳವರುಗಳ ಬಲ್ಲವಿಕೆಗಳ ಕೇಡ
ಎಲ್ಲವನು ಹೇಳುವೆನು ನಿನ್ನಯ
ಸೊಲ್ಲ ಸೋಲಿಸಿ ಸಿಕ್ಕಿಸುವೆನೆನು
ತಲ್ಲಿ ಮಾಯೆ ನಿಜಪ್ರತಾಪವನಾಡತೊಡಗಿದಳು ॥ ೩೧

ಹರಿಯಯೆದೆಯನು ಮೆಟ್ಟಿದೆನು ಶಂ
ಕರನನರ್ಧಾಂಗದೊಳು ನೆಟ್ಟನೆ
ಹರಿಸುಟಿಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ
ಸುರನರೋರಗರೆಂಬ ಮುಱಿವೆಯ
ಮರುಳ ತಂಡವನೆನ್ನ ತೊತ್ತಿರ
ಶರಣುಹೊಗಿಸಿದೆನೇನ ಕೇಳುವೆಯೆಂದಳಾ ಮಾಯೆ ॥ ೩೨

ಜಿನುಗುಮತಿಗಳ ಸಿದ್ಧಸಾಧಕ
ಮುನಿಗಳೆಂಬವದಿರುಗಳನು ನಾ
ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜೆಡೆ ಲೋಚು
ಅನಶನವ್ರತ ನಾರು ಬೇರೆಂ
ಬನಿತಱಲಿ ದಂಡಿಸುವೆನಾ ಕಾ
ನನದ ಮರುಳರನೇನ ಕೇಳುವೆಯೆಂದಳಾ ಮಾಯೆ ॥ ೩೩

ಆದಿಯಂತವನಱಿಯದೆಲ್ಲರ
ವೇದಿಸಿದೆನೆಂದಕಟ ಗರ್ವಿಸಿ
ಹೋದೆ ನಿನ್ನ ನಿಜಸ್ವಭಾವದ ಮತ್ತತನದಿಂದೆ
ಆದೊಡವರಂತಿರಲಿ ಮಿಕ್ಕಿನ
ವೇದ ಶಾಸ್ತ್ರ ಪುರಾಣವಾಗಮ
ವಾದಿಯಾದವಱಿಂದೆ ಕೇಳೆನುತಿರ್ದನಲ್ಲಮನು ॥ ೩೪

ಬಿಟ್ಟುಕಳೆ ಬಱುಮಾತ ಶಬ್ದಗ
ಳೊಟ್ಟಲೆಂಬುವು ತನ್ನ ಪಾದದ
ಘಟ್ಟಣೆಯ ಧ್ವನಿಯವಱಲಿನ್ನೇನ ಕೇಳುವೆನು
ಮುಟ್ಟ ತಿಳಿವೊಡೆ ಕೇಳು ನಿನ್ನಯ
ಕಟ್ಟಳೆಯತನವೈಸೆ ಎನುತಾ
ದಿಟ್ಟಮಾಯಾದೇವಿ ನುಡಿದಳು ಮತ್ತೆಯಲ್ಲಮನ ॥ ೩೫

ಎಲ್ಲರನು ನೀ ಜಱೆದು ಝಾಡಿಸಿ
ಹೊಳ್ಳುಗಳೆದೊಡೆ ನಿನ್ನಲೆನ್ನಲಿ
ಹೊಲ್ಲವೊಳ್ಳಿತನಱಿವ ಮಾತಂತಿರಲಿ ಹೇಳೊಂದ
ಬಲ್ಲೆಯಾದೊಡೆ ನೀನು ನಿನ್ನಯ
ಖುಲ್ಲತನವನು ಬಿಟ್ಟು ನಿರ್ಮಳ
ದಲ್ಲಿ ಮಾತಾಡೆಂದು ನುಡಿದನು ಮಾಯೆಗಲ್ಲಮನು ॥ ೩೬

ಹರಿಹರಬ್ರಹ್ಮಾದಿಗಳನೆ
ಲ್ಲರನು ನಿನ್ನಾಧೀನವೃತ್ತಿಯು
ಳಿರಿಸಿ ಮಿಗೆ ಱೋಡಾಡಿ ಕಾಡುವೆನೆಂದು ನೀ ನುಡಿದೆ
ಮರುಳೆ ನಿನ್ನನದಾರು ನಾನಾ
ಪರಿಯಲಾಡಿಸುವವರು ನೀನಿದ
ಪರಿಕಿಸದೆ ಗರ್ವದಲಿ ನುಡಿವರೆ ಮಾಯೆ ಕೇಳೆಂದ ॥ ೩೭

ಆರನಾರಾಡಿಸುವರೆಂಬುದ
ನಾರು ಬಲ್ಲರು ಸಾಕು ಬಱಿಯ ವಿ
ಚಾರವಂತಿರಲಿನ್ನದೇ ಹಱಿಮಾತನಾಡಿದರೆ
ಸಾರಲಱಿವವೆ ನಮಗೆ ನಮ್ಮ ಮ
ನೋರಥಂಗಳು ನಿನ್ನ ಧೂರ್ತವಿ
ಕಾರವೆಲ್ಲವ ಬಿಟ್ಟು ಕೃಪೆಮಾಡೆಂದಳಾ ಮಾಯೆ ॥ ೩೮

ಮಾಡಿದಸಿತಱ ಕರ್ಮಫಲ ಕೈ
ಗೂಡಿತುಳ್ಳುದು ನಿನಗದೇನನು
ಬೇಡುತಿಹೆ ಬೇಸಱದೆ ಬಱುದೆಗೆ ಬಂದು ಬೆಂಬಿಡದೆ
ಕಾಡಬೇಡಿನ್ನೇಳು ಸಖಿಯರ
ಕೂಡಿಕೊಳುತಲಿ ಮರಳಿ ನಿನ್ನಯ
ಬೀಡ ಸಾರುವದೊಳ್ಳಿತೆಂದನು ಮಾಯೆಗಲ್ಲಮನು ॥ ೩೯

ಭಾಷೆ ಸಲ್ಲದೆ ಹೋಯಿತೆನ್ನಯ
ವಾಸಿ ವರ್ಧಿಸಿ ಹೊತ್ತುತಿದೆ ಕೈ
ಲಾಸದವರಿದ ಕೇಳಿ ನಗುವಂತಾಯಿತೇ ಎನಗೆ
ಈಸು ಧಾವತಿಯಿಂದೆ ನಾ ಕಡು
ಘಾಸಿಯಾದೆನು ಬೆಂದ ಹುಣ್ಣಿನು
ಕೇಸುವರೆ ಕಂಬಿಯಲಿ ಕೇಳಕಟೆಂದಳಾ ಮಾಯೆ || ೪೦

ತರಳೆ ತನ್ನಯ ಹೊನ್ನು ಸಲ್ಲದೆ
ತಿರುಗಿ ಬಂದೊಡೆಯಕ್ಕಸಾಲೆಯ
ದುರುಳತನದಲಿ ಬಯ್ಯಬಹುದೇ ನೀನು ಮತಿಗೆಟ್ಟು
ಹರನನರ್ಚಿಸುವಂಗಭೇದಾಂ
ತರವನಱಿಯದೆ ಸಟೆಯ ಭಕ್ತಿಯ
ಭರದಲೇತಕೆ ಫಲವ ಬಯಸುವೆ ಮಾಯೆ ಕೇಳೆಂದ || ೪೧

ನಮ್ಮನೊಲ್ಲದುದಲ್ಲದೀ ಪರಿ
ನಮ್ಮನೆಲ್ಲರ ಮುಂದೆ ಭಂಗಿಸಿ
ಹೆಮ್ಮೆಗೆಡಿಸುವ ಪರಿಯ ನೋಡಾ ಎನುತ ಮನ ಮುಱುಗಿ
ಇಮ್ಮೆ ಬೆಂದವಳಿದ್ದಲಂತಿರೆ
ಹಮ್ಮವಿಸಿಯೊಱಗುತಲಿ ವಿಮಳೆಯ
ನೆಮ್ಮದಳು ನಿಲಲಾಱದಾಳಾಪಿಸುತಲಾ ಮಾಯೆ || ೪೨

ಬೆಱಗುವಡೆದಿರೆ ನೆಯ್ದಿಲಿಗೆ ನೇ
ಸಱಿನ ನೆಮ್ಮಗೆಯಾದ ತೆಱನಲಿ
ಮುಱಿವಡೆದ ಮಾಯಾಂಗನೆಯ ಮುಖಭಂಗವನೆ ಕಂಡು
ಮಱುಗುತಿರ್ದರು ಕೂಡೆ ಕೆಳದಿಯ
ರುಱುಬಿ ಸುಮ್ಮನೆ ಮಾಱುಮಾತಿಗೆ
ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ || ೪೩

ಶರಣಜನರಕ್ಷಾಮಣಿಯೆ ಕಿಂ
ಕರಚಕೋರಸುಧಾಕರನೆ ಭಾ
ಸುರದಯಾಂಭೋನಿಧಿಯೆ ನೀನೀ ಸ್ತ್ರೀಯ ತನುಮನವ
ಒರೆದು ನೋಡಿದೊಡಲ್ಲಿ ಭಾವಿಸೆ
ಹುರುಳು ಬಳಿಕೇನುಂಟು ನಿನ್ನಯ
ಕರುಣವಾಕೆಯ ಹರಣವೆಂದಳು ವಿಮಳೆ ವಿನಯದಲಿ ॥ ೪೪

ಬಾಲೆ ನೀರಿಗೆ ಹೆಪ್ಪನೆಱೆದರೆ
ಹಾಲಿನಂತಿರೆ ಹೆತ್ತು ಭುಂಜಿಸಿ
ಬಾಳಿದವರಾರುಂಟು ಭಾವಿಸಲಾ ಪ್ರಕಾರದಲಿ
ಕಾಳುಮತಿಗಳಿಗಿನಿತು ಬುದ್ಧಿಯ
ಹೇಳಿದರೆ ಫಲವೇನು ಸಾಕೀ
ಖೂಳೆಗಾನಿನ್ನೇನ ಮಾಡುವೆ ವಿಮಳೆ ಕೇಳೆಂದ ॥ ೪೫

ಕೇಳುಗಬ್ಬುನವೆಣ್ಣು ಕೋಪಿಸಿ
ಕಾಲಲೊದೆದೊಡೆ ಮೇಣು ಕರುಣಿಸಿ
ತೋಳಲಪ್ಪಿದೊಡೇನು ಪರುಷದ ಗಂಡನದಜಂತೆ
ಬಾಲೆಗೆಂತಾದೊಡೆಯು ನಿನ್ನ ಸ
ಮೇಳ ಘಟಿಸಿದ ಬಳಿಕ ಮಾಯೆಯ
ಪಾಲಿಸಲು ಬೇಕೆನುತ ನುಡಿದಳು ವಿಮಳೆಯಲ್ಲಮಗೆ ॥ ೪೬

ವನಿತೆ ನಿನ್ನಯ ಮಾತಹುದು ಕ
ಬ್ಬುನವದಾದೊಡೆ ಪರುಷ ಮುಟ್ಟಲು
ಕನಕವಹುದಲ್ಲದೆ ವೃಥಾ ಹಳೆಹಂಚು ಹೊನ್ನಹುದೆ
ಮನಸು ಸಂಚಲವಾದ ಮಾಯಾಂ
ಗನೆಯುದೇನನು ಮುಟ್ಟಿ ಮಾಡಿದೊ
ಡಿನಿತು ಸತ್ಫಲವಾಗಲಱಿಯದು ವಿಮಳೆ ಕೇಳೆಂದ ॥ ೪೭

ದೇವ ತಪ್ಪಿದೊಡೇನು ನೀನು ಕೃ
ಪಾವಲೋಕನದಲಿ ನಿರೀಕ್ಷಿಸಿ
ದೇವಿಯರ ಹೊಣಿಕೆಯ ಸಲಿಸಿದರೇನು ಕುಂದಹುದೆ
ದೇವತನಕೊಣೆಯುವೆ ಬಱಿದೆ ವೃ
ಥಾ ವಿಳಾಸದ ಮಾತ ಬೀಱದೆ
ಕಾವುದೈ ಕರುಣದಲಿ ಮಾಯೆಯನೆಂದಳಾ ವಿಮಳೆ ॥ ೪೮

ಒಂದು ಬೀಜವ ಬಿತ್ತಿ ಮೇಲ್ ಮ
ತ್ತೊಂದು ಫಲವನು ಬಯಸಿ ಬಾತೊಡೆ
ಬಂದುದಹುದೇ ತನಗೆ ದಿಟವೀ ಮಾಯೆ ಮರುಳಾಗಿ
ಮುಂದುಗಾಣದೆ ಮದದ ತಾಮಸ
ದಿಂದೆ ಚಂಚಲಭಕ್ತಿಭರದಲಿ
ಬಂದೊಡುಂಟೇ ಸತ್ಫಲಂಗಳು ವಿಮಳೆ ಕೇಳೆಂದ ॥ ೪೯

ಆದೊಡೆಲೆ ಘನಮಹಿಮ ನಿನ್ನಯ
ಪಾದಗಳನೆಂತಾದೊಡೆಯು ಸಂ
ಪಾದಿಸಿದ ಬಳಿಕಿನ್ನು ನಿನ್ನಯ ಕರುಣವಿದ್ದಂತೆ
ಕಾದು ರಕ್ಷಿಸು ಮನಸು ಬಂದೋ
ಪಾದಿಯಲಿಯೆಂದೆನುತ ಮಧುರಾ
ಮೋದವಚನವ ಸುರಿವುತಿರ್ದಳು ವಿಮಳೆಯಲ್ಲಮಗೆ ॥ ೫೦

ವಿಮಳೆ ವಿಮಳೆಯೆನಿಪ್ಪ ಹೆಸರನು
ಕಮಳಸಂಭವ ನಿನಗೆ ಸಲಿಸಿದ
ನಮಳಮತಿಯವನಹುದು ಚಾಗುರೆ ಎನುತ ಪರಿಣಮಿಸಿ
ಕ್ರಮದಲಿನ್ನಾದೊಡೆಯು ಮಿಗೆ ವಿ
ಶ್ರಮಿಸಬೇಕೆಂದೆನುತ ಬಳಿಕ
ಲ್ಲಮನು ಮಿಗೆ ವಿನಯದಲಿ ಮಾಯಾದೇವಿಗಿಂತೆಂದ ॥ ೫೧

ಕಾಮವೆತ್ತಲು ಪರಮತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸಸಖನೆತ್ತಲರಿಸಿನವೆತ್ತ ಬಸಿಲೆತ್ತ
ಭ್ರಾಮಕದ ನುಡಿ ಸಾಕು ನೀನೆ
ತ್ತಾ ಮಹಾಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ ಹೋಗೆಂದ || ೫೨

ಕನಸು ಮನಸಿನೊಳಾಗಳೆನ್ನಯ
ತನುವಿನಲಿ ನೀ ಸುಳಿದು ಮಚ್ಚಿಸಿ
ಯಿನಿತು ಥಾವತಿಗೊಳಿಸಿ ನಿಷ್ಕರುಣದಲಿ ನೀನೆನ್ನ
ಕನಲಿ ನುಡಿದೊಡೆ ನಾನು ಬಿಡುವೆನೆ
ತನಗೆ ತತ್ತಡೆ ಭಾವಿಸಲು ಸಾ
ವನಿತು ಬಂದೊಡೆ ಬರಲಿ ಬಿಡೆ ನಾನೆಂದಳಾ ಮಾಯೆ || ೫೩

ಕನಸಿನಲಿ ಚೇಳೂಱಿದೊಡೆ ವೇ
ದನಿಸಿತೆಂದಿರದೆದ್ದು ನರಳುವ
ಮನುಜರುಂಟೇ ಮರುಳೆ ನಿನ್ನ ಮನೋವಿಕಾರಗಳು
ನಿನಗೆ ತೋಱಿದೊಡೆಮ್ಮೊಳೇತಕೆ
ಮನಕತವ ನೀ ಮಾಡುತಿಹೆ ನಾ
ವಿನಿತು ಗಸಣೆಯ ಗೊಡವೆಗಾಱೆವು ಮಾಯೆ ಕೇಳೆಂದ || ೫೪

ವಾಸಿ ಹುಟ್ಟಿದ ಬಳಿಕ ನಾನಿ
ನ್ನೇಸು ದಿನವಿದ್ದಾದೊಡೆನ್ನಯ
ಭಾಷೆಯನು ನಾನುತ್ತರಿಸಬೇಕಲ್ಲದುಳಿದಂತೆ
ಆಸೆಯಿಲ್ಲದೆ ತಿರಿಗಿದೊಡೆ ಹೆಂ
ಗೂಸುತನಕದು ಹಾನಿಯಾ ಕೈ
ಲಾಸಕಾನೆಂತೆಯ್ದುವೆನು ಕೇಳೆಂದಳಾ ಮಾಯೆ || ೫೫

ಕಡಲನೀರುಗಳೆಲ್ಲವಮೃತದ
ಮಡುಗಳಾದರೆಯಹವು ಸುರಗಿರಿ
ಕುಡಿವಿಡಿದು ಹಬ್ಬಿದೊಡೆ ಹಬ್ಬುವುದವನಿಮಂಡಲದ
ಗಿಡುಗಳೆಲ್ಲವು ಕಲ್ಪತರುವಾ
ದೊಡೆಯುಹವು ತತ್ತದನುಗಾಲಕೆ
ಮಡದಿ ಮಾಯೆಗೆ ಪರಮತತ್ವಜ್ಞಾನವಿಲ್ಲೆಂದ ॥ ೫೬

ನುಡಿದು ನುಣ್ಣನೆ ನೀನು ಮೆಲ್ಲನೆ
ಸಡಿಲಿಹೋದರೆ ನಾನು ನಿನ್ನನು
ಬಿಡುವೆನೇ ಕೇಳೆನ್ನ ಪೈಜೆಯ ಸಲಿಸಿದನ್ನಬರ
ಒಡಲು ನಿನಗಿಲ್ಲೆಂಬ ಬಿಂಕದ
ಬೆಡಗು ಬೇಡಿನ್ನೇನ ಮಾಡಿಯು
ತುಡುಕಿದಲ್ಲದೆ ಮಾಣೆನೆಂದಂಗೈಸಿದಳು ಮಾಯೆ ॥ ೫೭

ಬಯಲ ಬಂಧಿಸಲೆಂದು ಕೃತನಿ
ಶ್ಚಯವ ಮಾಡಲು ಸಿಕ್ಕಬಲ್ಲುದೆ
ನಿಯತವೆನ್ನನು ಹಿಡಿದುಕೊಂಬೊಡೆ ನೋಡು ನೀನೆನುತ
ಪ್ರಿಯದಲಾಗಳೆ ತನ್ನ ನಿಜ ನಿ
ರ್ಣಯವ ನಿರ್ಮಿಸಿ ನಿಮಿಷದಲಿ ನಿ
ರ್ವಯಲಜಾಲವ ಬೀಸಿ ಹೋದನು ಮಾಯೆಗಲ್ಲಮನು ॥ ೫೮

ಜಾಱಿದನು ಬಳಿಕಾತನೀಕೆಗೆ
ಹೇಱಿದುದು ಕಡುದುಗುಡ ಸಖಿಯರು
ನೀಱೆಯನು ಸಂತೈಸಿದರು ನಾನಾಪ್ರಕಾರದಲಿ
ಗಾಱುದೊಱಿನ ಮಾಯೆಗೀಯೆಗೆ
ತೋಱಿಸುವನೇ ತನ್ನ ನಿಜವನು
ಮೀಱಿ ಮೀಸಲನಲ್ಲಮಪ್ರಭು ಗುರು ಗುಹೇಶ್ವರನು ॥ ೫೯

೨೩

# ನಂಜುಂಡ: 'ಕುಮಾರರಾಮ ಶೌರ್ಯದರ್ಶನ'

ಅತ್ತ ನೇಮಿಯು ಡಿನೊಳಗೆ ವಾದ್ಯಂಗಳ
ಮೊತ್ತದ ನಾದ ದೆಸೆಗಳ
ಹೊತ್ತ ಗಜಂಗಳ ಕಿವಿವಾಗಿಲನುಜಿ
ಕೆತ್ತವದೇನ ಪೇಳುವೆನು ॥ ೧

ಇಕ್ಕೆಲದೊಳಗೈತಪ್ಪಾನೆ ಕುದುರೆಯು
ತೆಕ್ಕೆಯೊಳಾ ನೇಮಿಖಾನ
ಉಕ್ಕೆ ಶರಧಿ ವಾದ್ಯನಿರ್ಘೋಷದಿಂ ಸಾ
ಲಿಕ್ಕಿ ನಡೆದನು ಕುಮ್ಮಟಕೆ ॥ ೨

ನೆಲ ನಡುಗಿತು ನೇತ್ರಾಂಬುವನಶ್ವನಂ
ಕುಲ ಸುರಿದುದು ಖಡ್ಗನಿವಹ
ಇಳೆಗೊಜಿಯಿಂದುರ್ಚಿ ಬಿಳ್ದವಾ ನೇಮಿಯು
ಬಲದೊಳುತ್ಪಾತ ಮಸಗಿತು ॥ ೩

ಅಳಿದುದಿಲ್ಲಾ ರಾಮ ಪುಸಿಯ ಸುದ್ದಿಯ ಪುಟ್ಟಿ
ಸಿಳೆಯೊಳು ಬರಿಸಿಕೊಂಡೆಮ್ಮ
ಕೊಲಿಸಬೇಕೆಂದು ಮಾಡಿದುದಲ್ಲದಿದೋಡೀ
ಬಲದೊಳುತ್ಪಾತವಾದಪುದೆ ॥ ೪

ಎಂದು ಬಲ್ಲವರಲ್ಲಲ್ಲಿ ನುಡಿಯುತ್ತಿರ
ಲಂದಾ ನೇಮಿಮಲ್ಲುಕನು
ಬಂದು ಕಂಡನು ಬಯಲೊಳು ಫೌಜುಮಾಡಿರ್ದ
ಸಂದ ಕಂಪಿಲನ ಬಲವನು ॥ ೫

ಏನಿದಚ್ಚರಿ ಪುರವನು ಪೋಜಿಮಡದಿರ್ದ
ಸೇನೆ ಬಂದೀ ಬಯಲೊಳಗೆ
ಆನದೆ ಬಂದೊಡ್ಡಿ ನಿಂದಿದೆಯೆಂದಾ
ಖಾನ ಕೇಳಿದನು ಮಂತ್ರಿಗಳ ॥ ೬

ತಂದೆ ಮಗನ ಕೊಲಿಸಿದನೆಂಬೀ ಸುದ್ದಿ
ಬಂದುದಿಲ್ಲೆಮ್ಮಯ ಮನಕೆ
ಇಂದಿನಾಹವದೊಳಗಾ ರಾಮನೆಮ್ಮ ಕೈ
ಯಿಂದ ಕಾಣಿಸಿಕೊಳ್ಳದಿರನು ॥ ೭

ಇದೆ ಭೂಕಂಪನವಿದೆ ರಕುತದ ಮಳೆ
ಯಿದೆ ಬಿಱುಗಾಳಿಯುದ್ರೇಕ
ಇದೆ ಧೂಮಕೇತು ಮುಂಗಡೆಯೊಳಗಾ ರಾಮ
ನಿದಿರಾಗದಿರ ನಮಗೆಂದು ॥ ೮

ಕನ್ನಡಿಗರು ಕಪಟಗಳವರೆಸಗುವ
ಗನ್ನವದೆಮಗೆ ಕಾಣಿಸದು
ಸನ್ನದ್ಧನಾಗು ಸಮರಕೇಳಿಗೆ ಬಲು
ಮನ್ನೆಯರನು ಕೂಡಿಕೊಂಡು ॥ ೯

ಎಂದು ಪೇಳಿದರು ಮಂತ್ರಿಗಳು ನೇಮಿಯ ಕೂ
ಡಂದಾದದ್ಭುತಗಳನು
ಬಂದ ಕಾರ್ಯವನೊರೆಯದ ಮಂತ್ರಿಗಳಿಂದ
ಸಂದ ಪಗೆವರಾರಪಿಗೆ ॥ ೧೦

ಅಱಿದರಾ ನೇಮಿಯ ಬಲದೊಳಾ ರಾಮನ
ಕುಱುಹನಲ್ಲಲ್ಲಿ ಬಲ್ಲವರು
ಮಱಿಗೊಂಡರು ಘಟ್ಟಬೆಟ್ಟವೊರಡಿಗಳ
ನುಱುವ ಭಟರು ಭಯಗೊಂಡು ॥

ಇದೆ ರಾಮನ ಕುದುರೆಯ ಹೇಷಾರವ
ಏದೆ ಪೊಸ ರನ್ನವಕ್ಕರಿಕೆ
ಇದೆ ಮುತ್ತಿನ ಜೋಡಹುದಿವ ರಾಮನಿಂ
ದೊದವಿ ಸದೆಯದಿರನೆಮ್ಮ ॥ ೧೨

ಇದೆ ಮುತ್ತಿನ ಕುಚ್ಚಿನ ಹನುಮನ ಬಾಲ
ಏದೆ ನವರತ್ನದ ಟೌಳಿ
ಇದೆ ವಚ್ಚೆಗಾವಿನ ಸತ್ತಿಗೆಯಿವ ರಾಮ
ನಿದಕೆ ಸಂದೇಹ ಬೇಡಿನ್ನು ॥ ೧೩.

ಎಂದು ವಜ್ಜೀರ ಮಲ್ಲುಕಖಾನರು ರಾಮ
ನೆಂದು ನಿಶ್ಚೈಸಿ ಮನದೊಳು
ಮುಂದಕ್ಕಡಿಯಿಡಲಮ್ಮದೆ ಬಲಸಹ
ನಿಂದರಲ್ಲಲ್ಲಿ ಮಱಿಯೊಳು ॥ ೧೪

ತುಱುಗೊಂಬಂದು ಕೌರವಬಲ ಪಾರ್ಥನ
ಕುಱುಹುಗಂಡಳ್ಕಿ ಹಿಂದಕ್ಕೆ
ಹೊಱಸಾರುವಂತೆ ನೇಮಿಯ ಬಲ ರಾಮನೆಂ
ದಱಿದೊಳಸರಿದುದಲ್ಲಲ್ಲಿ ॥ ೧೫

ಕರೆದು ಕರೆದು ನೇಮಿ ಖಾನಖಾನರಿಗಾ
ದರದಿಂದ ಕೊಟ್ಟುಡುಗೊಱೆಯ
ಎರಡು ಪಕ್ಕದಲಿ ನಿಲಿಸಿಕೊಂಡನು ರಾಮ
ನುರವಣೆಗಂಜಿ ಮನದೊಳು ॥ ೧೬

ಮುಗಿಲ ಮಱೆಯೊಳು ಮಿನುಗುವ ಮಿಂಚುಗಳೆನೆ
ಬಿಗಿದ ಸಿಂಗಾಡಿ ಬಿಲ್ಲುಗಳು
ಮಿಗೆ ರಂಜಿಸಿದುವಾ ನೇಮಿಯ ಬಲದೊಳು
ಸುಗಿಯೆ ಸುಭಟರರಿಬಲದ ॥ ೧೭

ಬಲವೈರಿಸುತನ ಮೇಲಿರದೆ ಮೋಹರಿಸಿದ
ಬಲಯುತ ಸಂಶಪ್ತಕರ
ಬಲವೆನೆ ನಿಂದರು ರಾಮನಾಥನ ಮೇಲೆ
ಕಲಕಲ ಮಸಗೆ ತುರುಕರು ॥ ೧೮

ಒಱಲೆ ಕಹಳೆ ಸೂಳೈಸೆ ತಂಬಟ ಲಗ್ಗೆ
ವಱೆ ಮೊಳಗಲು ಢಕ್ಕೆಯುಲಿಯೆ
ನೆಱೆಗಲಿರಾಮನು ನೇಮಿಯ ಬಲವನಂ
ದುಱುಬಿ ಹೊಕ್ಕನು ಬಲಸಹಿತ ॥ ೧೯

ಕಿಡಿಯುಡವಿಯನಾ ಮಂದರನಗ ಪಾ
ಲ್ಗಡಲ ಮುಗಿಲ ಮೋಹರವನು
ಕಡುಗಾಳಿ ಪೊಗುವಂತೆ ಪೊಕ್ಕನಾ ಬಲವನು
ಕಡುಗಲಿ ಕಂಪಿಲಾತ್ಮಜನು ॥ ೨೧

ಗಜಘಟೆಯನು ಸಿಂಹದ ಶಿಶು ಭಜಕರ
ವ್ರಜಿನವ್ಯಂದವನೀಶ್ವರನ
ನಿಜಶಕ್ತಿಯೆಯ್ದುವಂತೆಯ್ದಿದನಂದಾ
ಭುಜಬಲದಿಂದಾ ಬಲವ ॥ ೨೮

ಹೊಕ್ಕನು ಹೊರಳಿಯೊಡೆಯಿಸಿದನಾ ಫೌಜ
ನೆಕ್ಕತುಳದ ರಾವುತರನು
ಒಕ್ಕಲಿಕ್ಕಿದನಾ ಬಲ ಚೆಲ್ಲಿತು ದಿಕ್ಕು
ದಿಕ್ಕಿಗಾ ರಾಮನುಬ್ಬಿಗೆ ॥ ೨೨

ಉರುಳಿ ಹೊಯ್ದನು ಕರಿಗಳ ಕೈಯ ಕ
ತ್ತರಿಸಿ ಹೊಯ್ದನು ಕುದುರೆಗಳ
ಪೂರಳಿ ಪಂದಲೆ ಭೂಮಿಯ ಮೇಲೆ ಕಾಲಾಳ
ನಿರದೆ ಹೊಯ್ದನು ಕಲಿರಾಮ ॥ ೨೩

ಕಂಡ ಕಡೆಗೆ ಕೆದಱಿತು ನೇಮಿಖಾನನ
ದಂಡಾ ನೇಮಿ ಮಲ್ಲುಕನು
ಕಂಡದನಿರದೆ ಮೆಯ್ಗಾವಲವರ ಕೂಡಿ
ಕೊಂಡು ಸಾಗಿದನು ಬೆನ್ನಿತ್ತು ॥ ೨೪

ಬಡಿ ಕೊಂಡ ನೆಲ್ಲಿಯ ಕಾಯಂತಾ ಬಲ
ಬಿಡದೆ ಚೆಲ್ಲಿತು ಕಂಡ ಕಡೆಗೆ
ತಡೆಯದೆ ಬೆಂಕೊಂಡುದಾ ಕಂಪರಾಯನ
ಪಡೆಯಾ ತುರಕ ಬಲವನು ॥ ೨೫

ವರವಜ್ರದಿಂದ ಭೇದಿಸಿದ ಮಣಿಯ ಸೂತ್ರ
ವಿರದೆಯ್ದುವಂತಾ ಕುವರ
ಭರದಿಂದ ಮುಱಿಯಲಿಱಿದ ಸಂಗರವನಾ
ಪರಿವಾರ ಪೊಕ್ಕುದಳ್ತಿಯೊಳು ॥ ೨೬

ನೆತ್ತರ ತೊಱೆಯಿಂದ ಹೆಣದ ಬಣಬೆಯಿಂದ
ಕತ್ತರಿಸಿದ ಖಂಡದಿಂದ
ಎತ್ತ ನೋಡಿದಡಾ ರಾಮನಿಱಿದ ರಣ
ವಿತ್ತುದು ಕಣ್ಗೆ ಕೌತುಕವ ॥ ೨೭

ಪಡಗಾನೆ ಕುದುರೆ ಪೆರ್ದೆರೆ ಕೆನ್ನೀರ್ ಜಲ
ಕೆಡೆದಾಳು ಜಲಚರವಾಗೆ
ಕಡಲಂತೆ ಮೆಱೆದುದಾ ರಾಮನಿಱಿದ ರಣ
ದೆಡೆಯನದಾರು ಬಣ್ಣಿಪರು ॥ ೨೮

ತೀರ ಮುಱಿದುದಾ ನೇಮಿಯ ಬಲ ಕಂಪ
ಭೂರಮಣನ ಪರಿವಾರ
ವಾರಣ ವಾಜಿವಾಹಕರನು ಪಿಡಿದುಕೊಂ
ಡೋರಂತೆ ಮುರಳಿತೊಗ್ಗಿನೊಳು ॥ ೨೯

ಕಂಡನಾ ರಾಮಕುವರನ ರಾವುತಿಕೆಯು
ದ್ದಂಡತೆಯ ಕಂಪನೃಪತಿ
ಕೊಂಡಾಡಿದನು ಭೋಯೆಂದರೊತ್ತಿನ ಭೂ
ಮಂಡಲಾಧಿಪರು ಕೈಯೆತ್ತಿ ॥ ೩೦

ರಾಮನಿಂದೈದಾಜುಮುಡಿಯ ವಿಕ್ರಮವೀ
ರಾಮಕುಮಾರನೊಳಗಿದೆ
ಈ ಮಹಿಯೊಳಗಿವಗೆಣೆಯಿಲ್ಲೆಂದಾ
ಭೂಮಿಪನುಱೆ ಮೆಚ್ಚಿದನು ॥ ೩೧

ಆ ಕರ್ಣನಾ ಪಾರ್ಥನಲ್ಲದಿವನಿಗೀ
ಲೋಕದ ರಾವುತರೆಣೆಯೆ
ಈ ಕಲಿಯುಗದೊಳಿಂತಪ್ಪರಿಲ್ಲೆಂದಾ
ಭೂಕಾಂತನುಱೆ ಪೊಗಳಿದನು ॥ ೩೨

ಎಂದು ಕೊಂಡಾಡಿ ಬೈಚಪ್ಪ ನೀನಿವನನು
ತಂದು ಕಾಣಿಸು ನಮ್ಮನೆನಲು
ಮಂದಹಾಸದಿಂದ ನುಡಿದಾ ರಾಯಗಿಂ
ತೆಂದನು ಮಂತ್ರಿ ನಿಜವನು ॥ ೩೩

ಅಳಿದುದಿಲ್ಲವನೀಶ್ವರ ನಿನ್ನ ಮಗ ರಾಮ
ಕೊಲಿಸೆಂದು ನೀನೆನ್ನೊಡನೆ
ಬಲಿದು ಪೇಳಲು ಕಾದೆನಿಂದ್ರಜಾಲದ ವಿದ್ಯಾ
ಬಲದಿಂದ ರಾಯ ನಾನವನ ॥ ೩೪

ಎನೆ ಪಾರವಶ್ಯಾನಂದಾಶ್ಚರ್ಯಕೆ
ಮನವನಿತ್ತಾ ಕಂಪಿಲನು
ಅನಿತಱೊಳೆಚ್ಚತ್ತು ನುಡಿದನು ಗದ್ಗದ
ನಿನದದಿಂದೇನೇನೆಂದು || ೩೫

ಬಿಡು ರಾಯ ವಿಸ್ಮಯವನು ನಿನ್ನ ಮಗ ರಾಮ
ಮಡಿದುದಿಲ್ಲವನ ತಂದೀಗ
ಕೆಡಪುವೆ ನಿನ್ನಡಿದಾವರೆಗಳ ಮೇಲೆ
ಪೊಡವಿಪ ನಂಬು ನೀನೆಂದ || ೩೬

ಎನೆ ರೋಮಾಂಚನ ಮೆಯ್ಯೊಳು ಜುಮ್ಮೆಂದು
ಮ್ಮನೆ ನೆಗೆದುದು ನೇತ್ರಾಂಬು
ನನೆಯಿಸಿದುದು ಕದಪುಗಳನಾ ರಾಯನ
ಮನವನಾನಂದ ಮುಸುಕಿತು || ೩೭

ಬಳಿಕಾ ರಣಭೂಮಿಯಿಂದ ಭೂಪತಿಯನು
ಕಳುಪಿ ಚಾವಡಿಯೋಲಗಕೆ
ಒಲಿದಿದಿರಾಗಿ ನಡೆದನು ರಾಮಗೆ ಮಂತ್ರಿ
ತಿಲಕ ಮನ್ನೆಯರೊಡಗೂಡಿ || ೩೮

ಬಂದು ನಿವಾಳಿಯನಿಟ್ಟು ರಾಮನ ಕಂ
ಡಂದವನನು ಕೂಡಿಕೊಂಡು
ಬಂದನು ರಾಯನ ಪದವ ಕಾಣಿಸುವಾ
ನಂದ ಕೈಮಿಗೆ ಚಾವಡಿಗೆ || ೩೯

ಹಿಡಿಹೊನ್ನ ಕಾಣಿಕೆಯಿಕ್ಕಿಸಿ ಕಂಪಿಲ
ಪೊಡವಿಪತಿಯ ಪಾದಗಳನು
ಸಡಗರ ಸಾಲಿಡೆ ಕಾಣಿಸಿದನು ಮಂತ್ರಿ
ಕಡುಗಲಿ ರಾಮನಾಥನನು ॥ ೪೦

ಪೊಸತಾದತ್ತು ಪೊಡವಿ ಕಣ್ಗೆ ಮನುಜರು
ಹಸನಾದರು ರಾಜ್ಯಪದವಿ
ಎಸಕವೆಯ್ದಿದುದು ಕಂಪಿಲಗೆ ಕುಮಾರನ
ಮುಸುಡ ನಿರೀಕ್ಷಿಸುತಾಗ ॥ ೪೧

ಹರಪದವಿಯ ಚಿಂತೆ ಮಱೆದುದು ಮನದಿಂದ
ಹರಿಸದೆದೊಂದಭಿಲಾಷೆ
ಹರಿದು ಹರಿಹರದೇವಿಯ ಕುವರನ
ಸಿರಿಮೊಗವನು ಕಾಣುತವಗೆ ॥ ೪೨

ತೆಗೆದಪ್ಪಿಕೊಂಡನಂಗದೊಳಂಗ ಪೊಕ್ಕುದು
ತೆಗೆವುದಕರಿದೆಂಬಂತೆ
ಮೊಗದೊಳು ಮೊಗವಿಟ್ಟು ಮುಂಡಾಡಿದನು ತನ್ನ
ಮಗನನಾ ಕಂಪಿಲನೃಪತಿ ॥ ೪೩

ಅಕ್ಷಯಾತ್ಮಕನಗಜಾಪತಿಯಾ ವಿರೂ
ಪಾಕ್ಷಲಿಂಗನು ರಾಮುನನು
ರಕ್ಷಿಸಿದನು ಕೃಪೆಯಿಂದೆಂದು ನೃಪತಿ ವಿ
ಲಕ್ಷಣಾದನು ಮನದೊಳಗೆ ॥ ೪೪

ಬಳಿಕಿಂದ್ರಪದವಿ ಕೈಸಾರ್ದಂತೆ ಮನದೊಳು
ನಲಿವುತ ಮಗ ರಾಮವೆರಸು
ತಳರ್ದನು ಹೊಸಮಲೆದುರ್ಗಕೆ ಕಂಪಿಲ
ತಳತಂತ್ರದೊಡನೆ ಲೀಲೆಯೊಳು ॥ ೪೫

ಚರನೊರ್ವನೆಯ್ತಂದು ರಾಮನ ವಾರ್ತೆಯಂ
ಹರಿಹರದೇವಿಗೊರೆಯಲು
ಪರವಶೆಯಾದಳು ಪರಿತೋಷವೊತ್ತಂ
ಬರಿಸಲಂತಃಕರಣವನು ॥ ೪೬

ಪರಿಣಮಿಸಿದುದೊ ವೆಣ್ಣಾಕಾರದಿಂದಾಗ
ಪರಮಸಂತೋಷವೆಂಬಂತೆ
ಕರಮೆಸೆದಳು ಮಗನಳಿದುದಿಲ್ಲೆಂದೆಂಬ
ಚರವಚನವ ಕೇಳುತವಳು ॥ ೪೭

ಅಳಿದುದಿಲ್ಲ ಗಡ ಕುವರನಿಂದ್ರಜಾಲದಿಂ
ದುಳುಹಿದ ಮಂತ್ರಿಯವನ
ಬಲಯುತ ನೇಮಿಯ ಗೆಲಿದ ಗಡವನೆಂದು
ಪೊಳಲೊಳು ಸುದ್ದಿ ಮೆರೆದುದು ॥ ೪೮

ಗುಡಿ ತೋರಣಗಳೆದ್ದವು ವೀಥಿವೀಥಿಗ
ಳೆಡೆಗಳೊಳಗೆ ಸಾಲಿಟ್ಟು
ಬಿಡದೆ ಕುಪಕವೆಸೆದುವು ರಾಯಬೀದಿಯೊ
ಳೊಡನಾ ಮಂತ್ರಿಯಾಜ್ಞೆಯೊಳು ॥ ೪೯

ಗರುಡನಗರಿಯೊ ಗಂಧರ್ವಪಟ್ಟಣವೊ ಕಿ
ನ್ನರರಾಜಧಾನಿಯೊ ಸುರರ
ಪುರಿಯೊ ಎಂಬಂತೆಸೆದುದು ರಾಯಕುವರನ
ಬರವಿನೊಳಾ ಗಿರಿದುರ್ಗ ॥ ೫೦

ಮಗವೆರಸಮಹೇಂದ್ರನಮರಾವತಿಯನು
ಪೊಗುವಂತಾ ಕಂಪಿಲನು
ಮಗರಾಮ ಸಹಿತ ಪೊಕ್ಕನು ಪೊಳಲನು ಕೈ
ಮಿಗೆ ಸಂತೋಷ ಮನದೊಳು ॥ ೫೧

ವೀರಮುದ್ರಿಕೆಯ ವಿಚಿತ್ರದೋಲೆಯ ರತ್ನ
ಹಾರದ ಹೀರಾವಳಿಯ
ವಾರಿಜಾಕ್ಷಿಯರೆತ್ತಿದರು ಕುವರಗೆ ಮಂಗ
ಳಾರತಿಯನು ಮನವೊಲಿದು ॥ ೫೨

ನೆಲನನುಗ್ಘಡಿಸೆ ಕಟ್ಟಗೆಕಾರ್ತಿಯರು ಮುಂದೆ
ನಲವಿಂದಾ ರಾಯಕುವರ
ತಳರ್ದನು ತಾಯರಮನೆಗಾಕೆಯ ಮುಖ
ನಳಿನವನೀಕ್ಷಿಪಳ್ತಿಯೊಳು ॥ ೫೩

ಪೊಲಬುದಪ್ಪಿರ್ದ ಸಿಂಹದ ಶಿಶು ಜನನಿಯ
ಬಳಿಗೆ ಬರ್ಪಂತೆ ರಾಗದೊಳು
ನಲವಿಂದ ಬಂದು ಕಂಡನು ತಾಯ ತಳಿರಡಿ
ದಳವನಾ ರಾಯಕುವರನು ॥ ೫೪

ಮುತ್ತಿನಾರತಿಗಳನೆತ್ತಿದಳವಳಂದು
ಮುತ್ತಿನ ಸೇಸೆದಳಿದಳು
ಒತ್ತಿಬಿಗಿದು ತಳ್ಕೈಸಿಕೊಂಡಳು ತನ್ನ
ಹೆತ್ತ ಮಗನನಾ ಜನನಿ ॥ ೧೫

ಮತ್ತೆ ಮಗನ ಬಸಿಱೊಳಪುಗಿಸುವ ಬಗೆ
ವೆತ್ತಮರ್ದಪ್ಪಿಕೊಂಡವನ
ಚಿತ್ತಮನಾನಂದಶರಧಿಯ ಸುಳಿಗೊಲಿ
ದಿತ್ತಳಾ ಹರಿಹರದೇವಿ ॥ ೧೬

ಸೋರ್ಮುಡಿಯಾಡೆ ಬೆನ್ನೊಳು ನೀರೇಱಿದ
ಕಾರ್ಮುಗಿಲೆನೆ ಸೋದರಿಯರು
ಕೂರ್ಮೆಯಿಂ ಕಂಡರು ರಾಮನ ಪೆಣ್ಗಳು
ತಾರ್ಮುಟ್ಟೆನೊಳಗೈತಂದು ॥ ೧೭

ಪಲ್ಲಕ್ಕಿಯನಿಳಿದತ್ತೆಯತ್ತಿಗೆಯರ
ಮೆಲ್ಲಡಿದಾವರೆಗಳಿಗೆ
ನಿಲ್ಲದೆ ಮೈಯಿಕ್ಕಿದರು ರಾಮನಾಥನ
ವಲ್ಲಭೆಯರು ನಲವಿಂದ ॥ ೧೮

ಹಿರಿಯರು ಕಿಱಿಯರಂದು ಸತ್ಕಾರವ
ತರತಮಭಾವದಿಂದವರು
ವಿರಚಿಸಿದರು ರಾಮನಂಗನೆಯರ ಪೋಲ್ವ
ಗರುವೆಯರುಂಟೇ ಲೋಕದೊಳು ॥ ೧೯

ನಲವಿಂದ ಹರಿಹರದೇವಿ ನೃಪತಿ ಮಂತ್ರಿ
ತಿಲಕರೆಯ್ತಂದು ಬೇಗದೊಳು
ಲಲನೆಯರೊಡಗೂಡಿ ರಾಮನಾಥನ ನಿಜ
ನಿಳಯವನಿರದೆ ತುಂಬಿದರು ॥ ೬೦

೬

## ವಿರೂಪಾಕ್ಷ ಪಂಡಿತ : ‘ ರತಿವಿಲಾಪ ’

ಸೂಚನೆ ||   ಕಾಮನತಿಗರ್ವದಿಂ ಸಕಲಸನ್ನಾಹದಿಂ
ಹೇಮಕೂಟಾಚಲಕೆ ನಡೆತಂದು ಹರನನು
ದ್ದಾಮಬಾಣಂಗಳಿಂದೆಸೆ ವಿರೂಪಾಕ್ಷನುರಿ
ಗಣ್ಣಿನಿಂ ಸುಟ್ಟನವನ ||

ತಂದೆಯಡಿಗೆಱಗಿ ಕಳುಹಿಸಿಕೊಂಡು ಮನ್ಮಥಂ
ಮಂದಮಾರುತನಂ ಸಮೀಪಕ್ಕೆ ಕರೆದು ನೀ
ನಿಂದೆಮ್ಮ ಚೈತ್ರನಂ ಸಕಲಬಲಮಂ ಕೂಡಿ
ಕೊಂಡು ಬರವೇಳೆಂದೆನೆ
ಅಂದವಂ ಬಂದಾ ವಸಂತಂಗೆ ಕಂದರ್ಪ
ನಿಂದುಧರನಂ ಜಯಿಸಲೈದುವಂ ನೀಂ ಬೇಗ
ದಿಂದೆ ಚತುರಂಗಮಂ ಕೂಡಿಬಹುದೆನಲಖಿಳ
ಬಲವೆರಸಿ ಪೊಱಮಟ್ಟನು ||   ೧

ಮಾವುಗಳ್ ಮದವೇಱೆ ಮಲ್ಲಿಗೆ ಮನಂಗೊಳಿಸ
ಲಾ ವಿಮಲಚಂಪಕಂ ಸೊಂಪಡರೆ ಬಕುಳಮಿರ
ದಾವರಿಸೆ ಮುಕುಳಮಂ ಪಾದರಿಗೆ ಪದವಿ ಪೆ
ಚ್ಚಳ್ತ್ಯಯದಿರ್ಗಂತಿಯಲರ
ತೀವೆ ಪೊಸತಳಿರ್ಗಳನಶೋಕೆಗಳ್ ತಳೆಯೆ ಚೆಂ
ದಾವರೆಗಳಲರಿಸುಱೆ ಚೆಲ್ವಾಗೆ ಬನಬನದೊ
ಳೇವೇಳ್ವೆನಲರಂಬರಾಯನೆಡೆಗಾ ವಸಂ
ತಂ ಬಂದನುತ್ಸವದೊಳು ॥ ೨

ಬಂದು ಕಾಣ್ಕೆಯನಿಕ್ಕಿ ಭಯಭರಿತಭಕ್ತಿಯಿಂ
ಕಂದರ್ಪರಾಯ ಚಿತ್ತಯಿಸೀಗಳೆನ್ನೊಡನೆ
ಬಂದ ಸೇನಾನಮುದ್ರವನೆಂದು ಬಿನ್ನವಿಸು
ತಿರೆ ಕೇಳಿ ಚೈತ್ರನೊಡನೆ
ಇಂದುಧರನಿರ್ಪನಾ ಹೇಮಕೂಟಾಚಲದೊ
ಳಿಂದು ನಾವಾತನಲ್ಲಿಗೆ ಬೇಗ ಪೋಗಬೇ
ಕೆಂದು ಕರೆಸಿದೆವೆಂದು ಪೇಳ್ದು ಸಂಭ್ರಮದಿಂದೆ
ಪೊಱಮಡಲ್ಕನುವಾದನು ॥ ೩

ನವಪರಾಗದ ತಿಲಕಮಂ ರಚಿಸಿ ಮಲ್ಲಿಗೆಯ
ವಿವಿಧ ಮುಕುಳದ ಕಂಠಮಾಲೆಯಂ ತಳೆದು ಸೊಗ
ಸುವ ಕಂಜಗುಣದ ವಸನದ ಮಲ್ಲಗಾಸೆಯಂ
ಬಿಗಿದುಟ್ಟು ಮಾಂದಳಿರೊಳು
ಸವೆದ ಕೈಪೊಡೆಯ ಚೆಂಗಣಗಿಲೆಯ ಗೊಂಡೆಯದ
ತವೆ ಮೆಱೆವ ಕುಂದಕಂಕಿಣಿಯ ಪೂವಿನ ಬಿಲ್ಗೆ
ಸವಡಿಸಿದ ತುಂಬಿಮುಡಿವಾಳಗಳ ಸಿಂಜಿನಿಯ
ಮಂಜುಳಾಂಗಂ ಮೆಱೆದನು ॥ ೪

ಎಸೆವ ಕಬ್ಬಿನ ಬಿಲ್ಲನುಱೆ ಪಿಡಿದು ತುಂಬಿಗಳ
ಪೊಸ ತಿರುವನಳವಡಿಸಿ ನನೆಯಂಬುಗಳನು ಸೇ
ರಿಸಿ ನೋಡಿ ಹೆದೆಗಳೊಳ್ ತೀವಿ ಪೂವಿನ ಸರದ
ಝಲ್ಲಿಗಳನಾಂತು ಬಳಿಕ
ಮಿಸುಪ ಕೇದಗೆಯೆಸಳ ಕಗ್ಗಟ್ಟ ಕಟ್ಟಿ ರಂ
ಜಿಸುವ ಪೂದೇರನಾ ರತಿಯ ಕೈವಿಡಿದಡರಿ
ಬಿಸಜಾತಪತ್ರಂಗಳಿಂದೆ ಪೊಂಬಾಳೆಗಳ
ಚಮರದಿಂ ರಂಜಿಸಿದನು ॥ ೫

ತಳಿರ ಮಾಮರದಾನೆಗಳ ಗಿಳಿಯ ಕುದುರೆಗಳ
ಸಲೆ ರಥಾಂಗಂಗಳ ರಥಂಗಳ ವಿಲಾಸದಿಂ
ತಳರ್ವ ಕಾಂತಾಜನದ ಕಾಲಾಳ ಚಂದ್ರಮಂ
ತ್ರಿಯ ವರ ವಸಂತನೆಂಬ
ದಳವಾಯ ಗಡಣಂಗಳಿಂ ಕಾವರಾಯನಳಿ
ಕುಳರವದ ಭೇರಿಯಂ ಪೊಯ್ಸುತ್ತೆ ಕೋಕಿಳಂ
ಗಳ ರವದ ಕಹಳೆ ಚಾಳಂಕಿಪಾಠಕರ ಕಳ
ಕಳದಿಂದೆ ಪೊಱಮಟ್ಟನು ॥ ೬

ಚೂಳಿಯೊಳ್ ಮೈದೋಱಿದಂ ಮಂದಮಾರುತಂ
ಪಾಳಿಯಿಂ ನಡೆಸಿದಂ ಸೇನೆಯಂ ಸೇನಾನಿ
ಪೇಳಲೇಂ ಸಕಲ ಭರಭಾರಮಂ ಧರಿಸಿದಂ
ಚಂದ್ರಮಂ ಮದನಬಲದ
ಘೋಳಿಟ್ಟುಖಿಳ ಖಗವರವಾದ್ಯನಿಸ್ವನಂ
ಧೂಳಿ ಮುಸುಕಿದುದು ಬ್ರಹ್ಮಾಂಡಮಂ ರತಿಯ ಸ
ಮ್ಮೇಳದಿಂದೈದುವಂಗಜನ ಚಾತುರ್ಬಲಂ
ನಡೆದುದೀಶ್ವರನ ಮೇಲೆ ॥ ೭

ಇದಿರೊಳಾನದೆ ತೊಲಗು ತೊಲಗು ಮನ್ಮಥನೃಪನ
ಮದದಾನೆವಿಂಡೈದುತಿದೆಕೊ ಕಾಯಜನ ತಳ
ಪದ ಖಡ್ಗಮೈತರ್ಪುದಿದೆಕೊ ಕಾಮನ ಪೊಸ ಕ
ಠಾರವಿದೆ ಪೋಗು ಪೋಗು
ಅವಟು ಕೊಳ್ಳದು ಸಾರೆನುತ್ತೆ ಸನ್ಮುನಿಜನಕೆ
ಬೆದಱಿಕೆಯನಿಕ್ಕಿ ಸಾಱುವ ತೆಱದೊಳೊಡನೆ ಕೂ
ಗಿದುವು ಮನ್ಮಥನ ಪೂವಿನ ತೇರ ಮುಂಗಡೆಯ
ಕಹಳೆಗಳದೇನೆಂಬೆನು ॥ ೮

ಚೂಳಿಗಾಳಿಯು ದನಿಯನಾಲಿಸುತೆ ನೆಲದೊಳಗೆ
ಪೂಳಿರ್ದ ತನುಗಳಂ ಕೀಳಲಾಱದೆ ಮದನ
ದಾಳಿಯಂ ಕಂಡು ತರುಗುಲ್ಮಪುತ್ತಡರ್ದೊಡಲ
ನಲುಗಲಾಱದೆ ಭರದೊಳು
ಘೋಳಿಟ್ಟು ಕಣ್ಗೆಟ್ಟು ಬಾಯ್ಬಿಟ್ಟು ಮರವಟ್ಟು
ಬಾಳಗೊಲೆಯಂ ಬಂದನೆಂತೆನುತೆ ತಾಪಸರ್
ಬೇಳಾಗಿ ಕಾಳಾಗಿ ಪಾಳಾಗಿ ಮಮ್ಮಲಂ
ಮಱುಗಿದರ್ ತತ್ಕ್ಷಣದೊಳು ॥ ೯

ಕದಡಿ ತೊಟ್ಟಿಕ್ಕುವ ವಿಭೂತಿಗಳ ಬೆಮರಿನಿಂ
ಕೆದಱಿ ನೆಲಕೆಳಲ್ವ ಜಡೆಗಳನಕ್ಷಮಾಲೆಯಿಂ
ಗದಗದಿಪ ಕಂಠದ ಶಿವಸ್ಮರಣೆಯಿಂ ಕಮಂ
ಡಲು ದಂಡಗಳನೆ ಮಱೆದು
ಮದನನಿದೆ ಬಂದನೇಳೇಳೆಂದು ಕಣ್ಗೆಟ್ಟು
ಬೆದಱಿ ಕೈಕಾಲ್ಗೆಟ್ಟು ಕಳವಳಿಸಿ ಬೆಬ್ಬಳಿಸಿ
ಕುದಿದೋಡಿದರ್ ತಾಪಸರ್ ಕಾಮಭಯಮಾರ
ನಳ್ಕಿಸದು ಮೂಜಗದೊಳು ॥ ೧೦

ಪಟ್ಟದ ಮದದ್ವಿಪಂ ಮುಗ್ಗಿದುದು ಮುಂದಡ್ಡ
ಗಟ್ಟಿ ನರಿಯೂಳ್ಪುವುಱಿ ನಡೆಗೊಂಬ ಸೈನಿಕರ
ನಟ್ಟನಡುವಡಹಾಯ್ದು ಪೋಯ್ತು ಸಿಕ್ಕದೆ ಮೊಲಂ
ಗಜ ಹಯಂಗಳ ಕಣ್ಗೊಳು
ಬಟ್ಟಾಡಿದುವು ಕಂಬನಿಗಳಲರ ತೇರಿಂಗೆ
ಕಟ್ಟದ ಹಯಂ ನೊಗನನೀಡಾಡಿ ದೆಸೆದೆಸೆಗೆ
ಕೆಟ್ಟೋಡಿದುವು ಸ್ಮರನ ದಳದೊಳಾಯ್ತುತ್ಪಾತ
ಶತಮದೇಂ ವರ್ಣಿಸುವೆನು ॥ ೧೧

ಮಾರನೊಡನಾಗ ಚೈತ್ರಂ ಪೇಳ್ದನಪಜಯಂ
ಬಾರದಿರದವಶಕುನಮಂ ಮೀಱಿ ತಿರುಗೆನ
ಲ್ಕೋರಂತೆ ದಿವಿಜರ್ಗೆ ನಂಬುಗೆಯನಿತ್ತ ಬಳಿ
ಕಾಮದಂ ಕಾಣ್ಬೆ ನೆನುತೆ
ದಾರಿವಿಡಿದೈತಂದು ಹೇಮಕೂಟಾಚಲ
ದ್ವಾರದೊಳಗಿರ್ದ ನಂದೀಶನಂ ಕಂಡು ಪರಿ
ವಾರಮಳವಳಿದು ಕಳವಳಿಸಿದುದು ಮೀಱಿ ಪೊಗ
ಲಂಜಿ ಶಂಕರನ ಪೊರೆಗೆ ॥ ೧೨

ಹರನೆಡೆಗೆ ನಡೆವ ತೆಱನಂ ಕಾಣದಾ ಕುಸುಮ
ಶರನಧಿಕಚಿಂತೆಯಿಂದಿರೆ ಪೂಗಳಂ ಕೊಂಡು
ಗಿರಿತನುಜೆ ಪುಷ್ಪಕದೊಳಾಳಿಯರ್ವೆರಸಿ ಬರೆ
ಮನ್ಮಥಂ ಕಂಡು ನಮಿಸೆ
ತರಳ ನೀನಾರೆಂದು ಬೆಸಗೊಳಲ್ಕಾಂ ಪುಷ್ಪ
ಶರನಭವನಂ ನಿಮ್ಮೊಳೊಂದಿಸೆಂದಮರಕುಲ
ಮೊರೆಯೆ ಬಂದೆಂ ನಂದಿಯಂ ಕಂಡು ಪೋಗಲಂ
ಜಿದೆನೆಂದೊಡಿಂತೆಂದಳು ॥ ೧೩

ಎನ್ನ ಪುಷ್ಪಕದ ಮಱೆಯೊಳಗೆ ಬಾರೈ ಮದನ
ಮುನ್ನ ದಿವಿಜರ್ಗಿತ್ತ ಮಾತ ನೀಂ ಸಲಿಸೆನಲ್
ಪನ್ನಗಾಭರಣನಿನಪಾಯಮಾದಪುದೆನ
ಲ್ಕಂಜದಿರು ಭೀತಿ ಬೇಡ
ಎನ್ನ ನೀ ನಂಬಿ ಬಾರೆಂದು ಸಂತೈಸಿ ಮನ
ದನ್ನನೆಡೆಗಂಗಜಂವೆರಸು ನಡೆತಂದಭವ
ನಂ ನೇಮದಿಂ ಪೂಜಿಸಲ್ ಕಾವನಿನಿವಿಲ್ಲಿ
ಗಳಿವೆದೆಯನೇಱಿಸಿದನು ॥ ೧೪

ಮದನನಾ ದೇವಿಯರ ಪಿಂತೆ ನಿಂದುನ್ಮದನ
ಮದನ ಮೋಹನ ವಶೀಕರಣ ಸಂತಾಪ ಸಂ
ಜ್ಞದ ಮಹಾಬಾಣಂಗಳಿಂ ಕ್ರಮದೊಳೆಸೆಯೆ ಶಿವ
ನಂ ತಾಗಲಂಜಿ ಮರಳೆ
ಮದನಡಗಿ ಸರಳೈದಱಿಂದಲೊಂದೇ ಬಾರಿ
ಬೆದಱದಾರ್ದೆಸೆಯಲಾ ಶಿವನಂಗಮಂ ತಾಗೆ
ಹೃದಯದೊಳಗಱಿವು ತೋಱಲ್ ವಿರೂಪಾಕ್ಷನತಿ
ಕೋಪದಿಂದೀಕ್ಷಿಸಿದನು ॥ ೧೫

ನೋಡಲುರಿಗಣ್ಣಿನಿಂ ಮದನನ ಕಳೇವರಂ
ಕೂಡೆ ಭುಗಿಭುಗಿಲೆಂದು ಬೆಂದುಪೋದುದು ಹರಂ
ನಾಡೆ ತದ್ಭಸ್ಮಮಂ ಸರ್ವಾಂಗಕುದ್ಧೂಳ
ನಂಗೈದು ಪಾರ್ವತಿಯನು
ನೋಡಿ ನುಡಿಸದೆ ನಿರಾಕಾರಮಂ ತಳೆಯೆ ರತಿ
ಗಾಡದಿಂದೈತಂದು ಪತಿಯಳಿದ ಬಳಿಯೊಳೀ
ಡಾಡಿದಳ್ ದೇಹಮಂ ಬಾಯ್ಬೊಯ್ದು ಮೊಱೆಯಿಟ್ಟು
ಬಹಳ ಶೋಕಾರ್ತೆಯಾಗಿ ॥ ೧೬

ಪೊಡೆದರೇ ಕಾಮಧೇನುವ ಕಲ್ಪವೃಕ್ಷಮಂ
ಕಡಿದರೇ ಸೌಂದರ್ಯರಸದ ಕೆಱೆಯಂ ಮಾಣ
ದೊಡೆದರೇ ವಿಮಲ ಮುಕ್ತಾಮಣಿಯ ಕೆಂಡದೊಳ್
ಸುಟ್ಟರೇ ಮಾಣಿಕನನು
ಪುಡಿಗೆಯ್ದರೇ ಲಲಿತಶೃಂಗಾರಲತೆಯ ಕುಡಿ
ಯುಡಿದರೇ ಕೆಟ್ಟೆನಯ್ಯೋ ಎನ್ನಳಲ್ ಪೋಗಿ
ಸುಡದೆ ಗಂಡನ ಕಳುಪಿ ಕೊಲಿಸಿದಮರರನೆಂದು
ದೆಸೆದೆಸೆಗೆ ಬಾಯ್ಬಿಟ್ಟಳು ॥ ೧೭

ಹಾಯೆನ್ನ ಪ್ರಾಣೇಶ ಹಾಯೆನ್ನ ಸುವಿಲಾಸ
ಹಾಯೆನ್ನ ಮನದನ್ನ ಹಾಯೆನ್ನ ಪೊಸರನ್ನ
ಹಾಯೆನ್ನ ಭಾಗ್ಯನಿಧಿ ಹಾಯೆನ್ನ ಗುಣಶರಧಿ
ಹಾಯೆನ್ನ ಸಕಲ ಸುಖವೇ
ಓಯೆನ್ನಲಾಗದೇ ಶಿವಶಿವಾ ಯೆನ್ನೆಡೆಗೆ
ಬಾಯೆನ್ನಲಾಗದೇ ಯಾನಗಲೆ ನೊಂದೆಯ
ಯ್ಯೋಯೆನ್ನಲಾಗದೇ ಮದನ ಮೋಹನವದನ
ಹಾಯೆನುತ್ತಳವಳಿದಳು ॥ ೧೮

ಚೆಂದುಟಿಯ ಸೊಂಪುಗಳ ಪೊಳೆವ ಕದಪುಗಳ ನವ
ಕುಂದರದನದ ಚೆಲ್ವ ಬಾಯ್ದೆಱೆಯ ಕುಡುವುರ್ವಿ
ನಂದವಡೆದಿರ್ದ ನಾಸಿಕದ ನಿಟ್ಟೆಸಳ್ಗಣ್ಣ
ಕಾಂತಿಗಳ ತುಱುಗೆವೆಗಳ
ಮಂದಹಾಸದ ಕರ್ಣಭೂಷಣದ ಮಾಣಿಕ್ಯ
ದಿಂದೆ ಝುಗಝುಗಿಪ ಮಕುಟದ ಮಸ್ತಕದ ಮಹಾ
ಸೌಂದರ್ಯಸದನನಂ ಮದನನಂ ಕಾಣದೆಂ
ತಿರ್ಪೆನೋ ಹಾಯೆಂದಳು ॥ ೧೯

ಕುಸುಮಬಾಣವನೆತ್ತ ಬಿಸುಟೆ ಗಿಳಿಗುದುರೆಗಳ
ಹಸರವುನದೆಲ್ಲಿ ಕಳುಪಿದೆ ಚಂದ್ರಮುಸನಾವ
ದೆಸೆಗೆ ಬೀಳ್ಕೊಟ್ಟೆ ತಂಗಾಳಿಗೇನೂಳಿಗವ
ನಿತ್ತೆ ಮಾಮರದಾನೆಯ
ಎಸೆವ ಪೂವಿಲ್ಲನಳಿವೆದೆಯನಾರ್ಗಿತ್ತೆ ಶೋ
ಭಿಸುವಂತೆ ಕೊಂಚೆ ಕೊಳರ್ವಕ್ಕಿಗಳನೇಗೆಯ್ದೆ
ಪೊಸ ಬಸಂತನನಾರ ಕಯ್ಯೆಡೆಯನಿತ್ತೆಯ್ಯ
ಹಾ ಕಾಂತ ಹಾಯೆಂದಳು ॥ ೨೦

ಪತಿಯುಳಿದ ಪೊರೆಯೊಳಗೆ ಪೊರಳುತುಂ ನರಳುತುಂ
ಮತಿಗೆಟ್ಟು ಮರವಟ್ಟು ಚೀರುತುಂ ದೂಱುತುಂ
ಧೃತಿಯಿಂದೆ ತಾಂ ಮೆಲ್ಲನೇಳುತುಂ ಬೀಳುತುಂ
ದೆಸೆದೆಸೆಗೆ ಬಾಯ್ವಿಡುತ್ತುಂ
ಗತಿಯಾವುದೆನಗೆಂದು ಬೇಡುತುಂ ಕೋಡುತುಂ
ಕ್ಷಿತಿಯೆ ಬಾಯ್ಬಿಱಿಯೆಂದು ಕರಗುತುಂ ಕೊರಗುತುಂ
ಖತಿಯಿಂದೆ ದಿವಿಜರಂ ಬಯ್ವುತುಂ ಸುಯ್ವುತುಂ
ರತಿ ಪತಿಗೆ ಶೋಕಿಸಿದಳು ॥ ೨೧

ರಾಮ ಕೇಳಾಗಳಾ ಮೃಗಪಕ್ಷಿಸಂಕುಳಂ
ಕಾಮನರಸಿಯ ಶೋಕಮಂ ನೋಡಿ ದುಃಖದಿಂ
ತಾವೊಡನೆ ಬಳಸಿ ಕಂಬನಿದುಂಬಿ ಮೋಹಿನಾ
ಸೆಯನುಳಿದು ನಿಂದಿರ್ದುವು
ಭೂಮಿಜಂಗಳ್ ಬಾಡಿ ಸೋಲುತಿರ್ದುವು ಲತಾ
ಸ್ತೋಮಂಗಳೊಣಗಿ ಮಿಗೆ ನೇಲುತಿರ್ದುವು ಕೂಡೆ
ತಾಮರಸವಾದಿಗಳ್ ಕೊರಗುತಿರ್ದುವು ದುಃಖ
ಮೆಂತಪ್ಪರಂ ಕೆಡಿಸದೇ ॥ ೨೨

ಉಲಿಯದಿರ್ಪುದು ಭ್ರಮರಿ ಪೊಳೆಯದಿರ್ಪುದು ಚಮರಿ
ಕೆಲೆಯದಿರ್ಪುದು ಪಿಕಂ ಮುಳಿಯದಿರ್ಪುದು ಶುಕಂ
ಸುಳಿಯದಿರ್ಪುದು ಕರಿಣಿ ಕಳಿಯದಿರ್ಪುದು ಹರಿಣಿ
ಗಳಹದಿರ್ಪುದು ಪಾರಿವಂ
ಉಲಿಯದಿರ್ಪುದು ಕೋಕಿ ನಲಿಯದಿರ್ಪುದು ಕೇಕಿ
ಯುಲುಕದಿರ್ಪುದು ಕೊಂಚೆಯಲುಕದಿರ್ಪುದದಂಚೆ
ಲಲನೆಯಳಲಂ ನೋಡಿ ತಮ್ಮದೆಂದೇ ಮಾಡಿ
ಕೊಂಡು ಘನಶೋಕದಿಂದೆ ॥ ೨೩

ಕಾವ ನಿನ್ನಂ ಕಾಯದಾದನೇ ಮಗನೆಂದು
ಮಾವನೀ ಲೋಕಮುಂ ರಕ್ಷಿಸುವನೆಂಬ ನುಡಿ
ಹೇವವಲ್ಲವೆ ತನಗೆ ಕಟಕಟಾ ಸಕಲ ಲೋ
ಕಂಗಳಂ ಸೃಜಿಪೆನೆಂಬ
ಭಾವನಯ್ಯೋ ತನ್ನ ತಮ್ಮನೆಂದೆಂಬ ನಿಜ
ಭಾವದಿಂ ಮರಳಿ ಸೃಷ್ಟಿಸಲಾಗದೇ ಮಹಾ
ದೇವ ನನಗಿನ್ನಾರು ದಿಕ್ಕುಗೆಟ್ಟೆಂ ಕೆಟ್ಟೆ
ನೆಂದು ರತಿ ಶೋಕಿಸಿದಳು ॥ ೨೪

ತರುಗಳಿರ ಲತೆಗಳಿರ ಮೃಗಪಕ್ಷಿಗಳಿರ ಭಾ
ಸುರ ಸುರಾಂಗನೆಯರಿರ ದಿಗ್ದೇವಿಯರಿರ ವರ
ಗಿರಿಗಳಿರ ಭೂದೇವಿ ವನಲಕ್ಷ್ಮಿಯರಿರ ಕಂ
ಡಿರೆ ಯೆನ್ನ ವಿಧಿಯನೀಗ
ಕರುಣಿಸೆಲೆ ತಾಯೆ ಗಿರಿಜಾತೆ ನಿನ್ನಂ ನಂಬಿ
ಹರನ ಕಣ್ಗಿಚ್ಚಿಗಾಹುತಿಯಾಗಿ ಪೋದನೆ
ನ್ನರಸನೇಗುವೆನೆಂದು ಮಱುಗುತಿರೆ ಕೇಳುತಾ
ಶಿವೆ ತನ್ನೊಳಿಂತೆಂದಳು ॥ ೨೫

ತಂದೆತಾಯಂ ಬಿಟ್ಟುದೊಂದು ಮದನಂ ನಂಬಿ
ಬಂದುದೆರಡೀಶ್ವರನವಜ್ಞೆ ಮೂಱ್ ಸತಿಯ ಶೋ
ಕಂದೋಱ್ ನಾಲ್ಕು ಲೋಕಾಪವಾದಮುದ್ಭೈದು
ನವಯೌವನೋದಯದೊಳು
ಬಂದಡವಿಯೊಳಗಿರ್ಪುದಾಱೆನ್ನ ನುಡಿಸದೆಯು
ಮಿಂದುಜೂಟಂ ಪೋಗಲೇಳಾದುದೀಗಲೆನ
ಗೊಂದಡಸಲೇಳಡಸಿತೆಂಬ ನುಡಿ ನಿಜವಾದು
ದೆಂದಗಜೆ ಚಿಂತಿಸಿದಳು || ೨೬

ರತಿಯ ಸಂತಾಪಮಂ ನೋಡಿ ಕಡುನೊಂದು ಪಾ
ರ್ವತಿ ಮಹಾಕರುಣದಿಂ ಕಾಂತೆ ಬಾ ಕೇಳ್ ನಿನ್ನ
ಪತಿಯಸೀವೆಂ ಮಹಾದೇವನಂ ಕೂರ್ತು ತಪ
ವಂ ಮಾಡಿ ಸಲೆ ಮೆಚ್ಚಿಸಿ
ಅತಿದುಃಖಮಂ ಮಾಡಬೇಡೆಂದು ತಲೆದಡವಿ
ಸತಿ ಸಂತವಿಟ್ಟು ಬಳಿಕೀಶ್ವರನನೊಳಕೆಯ್ವ
ಗತಿಯಾವುದೆಂದು ನಿರ್ಧರಿಸಿ ತನ್ನೊಳ್ ತಾನೆ
ಗಿರಿಜಾತೆ ಚಿಂತಿಸಿದಳು || ೨೭

## ೭

# ಲಕ್ಷ್ಮೀಶ : 'ಮಯೂರಧ್ವಜನ ದೇಹಾರ್ಧದಾನ'

ಸೂಚನೆ ॥ ದ್ವಿಜನಾಗಿ ಬಂದು ಬೇಡಲ್ ಮಯೂರಧ್ವಜಂ
ನಿಜಶರೀರದೊಳರ್ಧಮಂ ಕೊಯ್ದು ಕೊಟ್ಟು ಪಂ
ಕಜಪತ್ರನೇತ್ರನಂ ಮೆಚ್ಚಿಸಿ ಹಯದ್ವಯಮ
ನಿತ್ತು ಮಖಮಂ ಮಾಣ್ದನು ॥

ಭೂರಮಣ ಕೇಳ್ ಕೃಷ್ಣಕಾಂಕ್ಷಿಯಾಗಿರ್ದಂ ಮ
ಯೂರಧ್ವಜಕ್ಷಿತೀಶ್ವರನಿತ್ತಲತ್ತ ರಣ
ಧಾರಿಣಿಯೊಳಸುರಾರಿಗೆಚ್ಚಱಿಕೆ ತಲೆದೋಱಿ
ತರ್ಜುನಂಗಱಿವಾದುದು
ವೀರಭಟರೆಲ್ಲರ್ಗೆ ಮೂರ್ಛೆ ತಿಳಿದುದು ಬಳಿಕ
ವಾರಿಜಾಕ್ಷಂ ಸಕಲಸೇನೆಯಂ ಸಂತೈಸಿ
ಚೋರಬುದ್ಧಿಯೊಳೊಂದುಪಾಯಮಂ ಕಂಡಾ ಧ
ನಂಜಯಂಗಿಂತೆಂದನು ॥ ೧

ನೋಡಿದೈ ಕುಂತೀಕುಮಾರ ತಾಮ್ರಧ್ವಜಂ
ಮಾಡಿದ ವಿಘಾತಿಯಂ ನಮ್ಮೆಲ್ಲರಂ ಧುರದೊ
ಳೀಡಿಱಿದುರುಳ್ಚಿ ಹಯಮಂ ಕೊಂಡು ರತ್ನಪುರಿ
ಗೈದಿದಂ ಪಿತನ ಬಳಿಗೆ
ಆಡಲೇನಹುದಿನ್ನು ಸೇನೆ ಮೆಲ್ಲನೆ ಪಿಂತೆ
ಬೀಡಾಗಿ ನಡೆತರಲಿ ಮುಂದೆ ಪೋದಪೆನೆನ್ನ
ಕೂಡೆ ಬಾ ನಿನಗೊಂದುಪಾಯಮಂ ತೋಱಿಸುವೆ
ನೆಂದನಸುರಾರಿ ನಗುತೆ ॥ ೧

ಆ ಹರಿಯ ನುಡಿಗೇಳ್ದು ಫಲುಗುಣಂ ಸೇನಾಸ
ಮೂಹಮಂ ಪಿಂದುಳಿಪಿ ರತ್ನನಗರಿಗೆ ಪಕ್ಷಿ
ವಾಹನನ ಕೂಡೆ ನಡೆತಂದನವನಿರ್ವರುಂ
ಮಾತಾಡಿಕೊಂಡು ಬಳಿಕ
ರೂಹುಗಾಣಿಸದಂತೆ ವಿಪ್ರವೇಷವನಾಂತು
ದೇಹಿಕರ ತೆಱದಿಂದೆ ವೃದ್ಧನಾದಂ ಶೌರಿ
ಮೋಹದಿಂ ತನಗೆ ಕೈಗುಡುವ ಬಾಲಕಶಿಷ್ಯ
ನಾದನಮರೇಂದ್ರಸೂನು ॥ ೨

ಜನನಾಥ ಕೇಳ್ ಮಯೂರಧ್ವಜಮಹೀಶ್ವರಂ
ದಿನನಾಥನುದಯದೊಳ್ ವಿಮಲಸಂಧ್ಯಾವಿಧಿಯ
ನನುಕರಿಸಿ ಕೃಷ್ಣನಿದ್ದೆಡೆಗೆ ತಾಂ ಪೋಗಿ ಕಂ
ಡಪೆನೆಂಬ ಕಾರಿಯವನು
ಮನದೊಳಗೆ ನಿಶ್ಚೈಸಿ ಪೊಱಮಡುವನಾಗಿ ನಿಜ
ತನುಜನಂ ಕರಸಿ ಮಂತ್ರಿಗಳೆಲ್ಲರಂ ಬರಿಸಿ
ವಿನುತಭೂಸುರನೃಪಾಲಸ್ತೋಮದೊಡಗೂಡಿ
ಕುಳ್ಳಿರ್ದನೋಲಗದೊಳು ॥ ೪

ಆನ್ನೆಗಂ ವೃದ್ಧವಿಪ್ರಾಕಾರಮುಂ ತಳೆದ
ಪನ್ನಗಾರಿಧ್ವಜಂ ನಿಜಶಿಷ್ಯಪಾರ್ಥನಂ
ತನ್ನೊಡನೆ ಕೂಡಿಕೊಂಡೊಯ್ಯನೊಯ್ಯನೆ ಹಯ
ದ್ವಯದಿಂದೆ ಪತ್ನಿಸಹಿತ
ರನ್ನದೊಡವುಗಳ ಕತ್ತುರಿಯ ತಿಲಕದ ನೊಸಲ
ಮನ್ನೆಯರ ಗಡಣದಿಂ ದ್ವಿಜನಿಕರದಿಂದೆ ಸಂ
ಪನ್ನದೀಕ್ಷೆಯೊಳೆಸೆವ ಭೂಪನೆಡೆಗೆಯ್ದಿ ಕೇಳ್
ಸ್ವಸ್ತ್ಯಸ್ತು ನಿನಗೆಂದನು ॥ ೫

ಮತ್ತಲೆ ಮಹೀಪಾಲಶಾರ್ದೂಲ ನಿನಗಾಗ
ಉತ್ತರೋತ್ತರಮೆಂದು ತನಗೆ ನೀಂ ಬೇಡಿದುದ
ನಿತ್ತಪೆ ಮಹಾದಾನಿಯೆಂದು ಶಿಷ್ಯಂವೆರಸಿ
ಬಂದೆನಾನೀಗ ನಿನ್ನ
ಉತ್ತಮಾಧ್ವರಶಾಲೆಗೆಂಬ ದ್ವಿಜನಂ ಕಂಡು
ಚಿತ್ತದೊಳ್ ಬೆದಱಿ ನೃಪನಿದಿರೆದ್ದು ಪದಕೆಱಗಿ
ದತ್ತಾರ್ಘ್ಯಪಾದ್ಯಾಸನಂಗಳಿಂದುಪಚರಿಸಿ
ಕುಳ್ಳಿರಿಸುತಿಂತೆಂದನು ॥ ೬

ಎಂದು ಪರಿಯಂತಂ ದ್ವಿಜರ್ಗವಜ್ಞೆಯನೆಸಗ
ರಂದುಪರಿಯಂತಮ್ಮೆಸಲೆ ನರರ ಬಾಳ್ಕೆ ನೀಂ
ಬಂದು ಪರಸಿದೊಡಾದುದಿಂದುತ್ತರೋತ್ತರಂ
ತನಗೆ ನಿಶ್ಚಯಮಿಳೆಯೊಳು
ಸಂಧಿಸಿದ ಜನದ ವಂದನೆಗೆ ಮೊದಲೇ ಸ್ವಸ್ತಿ
ಯೆಂದೊಡಾ ಭೂಸುರಂ ಪ್ರಿಯದೊಳಾ ಪ್ರಾಣಿಯಂ
ಕೊಂದನಲ್ಲದೆ ಬೇಱೆ ಶಾಪಮೇತಕೆ ವಿಪ್ರ
ಪೇಳೆಂದೊಡಿಂತೆಂದನು ॥ ೭

ಪರಸಲಾಗದು ನಮಸ್ಕಾರಕ್ಕೆ ಮುನ್ನೆ ಭೂ
ಸುರರನ್ಯರಂ ತನ್ನ ಸಂಕಟನಿಮಿತ್ತದಿಂ
ದರಸಂಗೆ ಬಿನ್ನಪಂಗೈವನಾಶೀರ್ವಾದ
ಮಂ ಮೊದಲೆ ಮಾಡದಿಹನೆ
ಧರಣಿಪತಿ ವಂದ್ಯನಲ್ಲವೆ ದೋಷಮೇನಿದಕೆ
ಪಿರಿದಾರ್ತನಾಗಿ ನಿನ್ನೆಡೆಗೆ ನಾಂ ಬಂದೆನ
ಧ್ವರಶಾಲೆಗೆಂದು ಕಪಟದ್ವಿಜಂ ನುಡಿಯಲ್ಕೆ
ನರನಾಥನಿಂತೆಂದನು ॥ ೮

ದ್ವಿಜತಿಲಕ ನೀನನುಗ್ರಹಿಸೆನಗೆ ಧನ್ಯನಾಂ
ನಿಜಶಿಷ್ಯನಂ ಕೂಡಿಕೊಂಡು ಮುಖಮುಂಟಪಕೆ
ಬಿಜಯಮಾಡಿದ ಕಷ್ಟಮಾವುದೇತಱೊಳಾಸೆ
ನಿನಗಾರ್ತನೇನಿದಱೊಳು
ತ್ಯಜಿಸಬೇಡೊಂದುಮಂ ಪೇಳ್ದೊಡಾನೀವೆನಾ
ರಜಮಿಲ್ಲದೆಲ್ಲಮಂ ವಾಚಿಸೆಂದಾ ಶಿಖಿ
ಧ್ವಜನಾಡಲಾ ವಿಪ್ರನಿಂತೆಂದು ತನ್ನ ವೃ
ತ್ತಾಂತಮಂ ವಿವರಿಸಿದನು ॥ ೯

ಉರ್ವೀಂದ್ರ ಕೇಳಾದೊಡಾಂ ಧರ್ಮಪುರದೊಳ್ ಪೆ
ಸರ್ವಡೆದಿಹೆಂ ಕೃಷ್ಣಶರ್ಮನೆಂದೆನಗೆ ಸುತ
ನೊರ್ವನುಂಟಾತನ ವಿವಾಹಕ್ಕೆ ತವ ಪುರೋ
ಹಿತ ಸತ್ಯಶೀಲನಲ್ಲಿ
ಒರ್ವ ಕನ್ನಿಕೆ ಮದುವೆಗಿಹಳೆಂದೊಡಲ್ಲಿಗ
ಕ್ಕುರ್ವರಸಿ ಮಗನನೊಡಗೊಂಡು ಬರುತಿರ್ದೆಂ ಪೊ
ದರ್ವಡೆದಡವಿಯ ಪಥದೊಳ್ ಪಿಡಿದುದೊಂದು ಕೇ
ಸರಿ ತನ್ನ ನಂದನನನು ॥ ೧೦

ಆ ಸಿಂಗಮತಿಭರದೊಳೆಱಗಲಾ ಭೀತಿಗೆ ನೃ
ಕೇಸರಿಸ್ಮರಣೆಯಂ ಬಿಡದೆ ನಾನಕಟ ಹಾ
ಹಾ ಸೂನು ಹಾಯೆಂದು ಹಂಬಲಿಸಲದು ತನ್ನ
ಘೋರ ನಖದಂಷ್ಟ್ರದಿಂದೆ
ಗಾಸಿಮಾಡದೆ ಪುತ್ರನಂ ಪಿಡಿದುಕೊಂಡಟ್ಟ
ಹಾಸದಿಂ ಮಾನವರ ತೆಱದಿಂದೆ ನುಡಿದುದೆಲೆ
ಭೂಸುರೋತ್ತಮ ತನ್ನ ಮಾತನಾಲಿಸು ಬಱಿದೆ
ಹಲುಬಲೇನಪ್ಪುದೆಂದು ॥ ೧೧

ಮಕ್ಕಳಿಲ್ಲದವರ್ಗೆ ಲೋಕಮಿಲ್ಲೆಂಬುದೇ
ನಕ್ಕಜವೆ ನಿಖಿಳನಿಗಮಾರ್ಥಮಿದು ತನಗೀಗ
ಸಿಕ್ಕಿದನಲಾ ನಿನ್ನ ತನುಸಂಭವಂ ಬಿಡಿಸಿ
ಕೊಳಲಾರ್ಪರಾರು ಬಱಿದೆ
ಕಕ್ಕುಲಿತೆ ಬೇಡ ನಡೆ ಶಿಷ್ಯನಂ ಕರೆಕೊಂಡು
ಮಿಕ್ಕ ಸುತರುಳ್ಳೊಡಾರೈವುದೆನೆ ಮಗನ ಮೇ
ಲಕ್ಕಱಾವರಿಸಿ ಕಡುಶೋಕದಿಂದುಗ್ರಕೇ
ಸರಿಗೆ ತಾನಿಂತೆಂದೆನು ॥ ೧೨

ಅತಿವೃದ್ಧನಲ್ಪದಿನಮಿರ್ಪವಂ ಪುತ್ರವ
ರ್ಜಿತನಿನ್ನು ತಾನಿರ್ದು ಮಾಳ್ಪುದೇನೆನ್ನನಾ
ಹುತಿಗೊಂಡು ತನಗೆ ಗತಿಗುಡುವ ಸುತನಂ ಬಿಡುವು
ದೆಂದು ನಾಂ ಬೇಡಿಕೊಳಲು
ಮೃತಿಯ ಬಯಸುವ ದುಃಖಿಗಾವ ಕಂಟಕಮಿಲ್ಲ
ಹತವಹುದು ಸುಖದಿಂದೆ ಬಾಳ್ವಂಗೆ ಕಾಲಕ
ಲ್ಪಿತದಿಂದೆ ದೊರಕಿದನಿವಂ ನಿನ್ನನೊಲ್ಲೆ ನಾಂ
ಪೋಗೆಂದು ಹರಿ ನುಡಿದುದು ॥ ೧೩

ಆ ನುಡಿಗೆ ನಡುಗಿ ತನಯನ ಮೇಲಣಾಸೆಯಿಂ
ದಾನೆಂದೆನಾ ಸಿಂಹಕೆಲೆ ಮೃಗಾಧಿಪ ತನ್ನ
ಸೂನುವಂ ಕಾವರಿಲ್ಲವೆ ಧರೆಯೊಳುಗ್ರತಪ
ದಾನಧರ್ಮಂಗಳಿಂದೆ
ಏನುಪಾಯಂಗೆಯ್ವೆನೆಂದು ಮಱುಗಲ್ಕೆ ಪಂ
ಚಾನನಂ ಬಳಿಕ ತನಗೊಂದಾಸೆಯಂ ಕೊಟ್ಟು
ಭೂನಾಥ ನಿನ್ನೆಡೆಗೆ ಕಳುಹಿದೊಡೆ ಬಂದೆನೆನ
ಲವನೀಶನಿಂತೆಂದನು ॥ ೧೪

ವಿಪ್ರೇಂದ್ರ ಕೇಳೆನ್ನ ರಾಷ್ಟ್ರದೊಳ್ ನಾರಸಿಂ
ಹಪ್ರವರ್ತನಮಲ್ಲದೆಲ್ಲಿಯುಂ ಕ್ಷುದ್ರಸಿಂ
ಹಪ್ರಸಂಗವನಱಿಯೆನಿನ್ನೆಗಂ ನಿನ್ನ ಸುತ
ನಂ ಪಿಡಿದ ಸಿಂಹಮುಂಟೆ
ಅಪ್ರಸಿದ್ಧಪ್ರೋಕ್ತಮಿದು ಸಿಂಹಕೆನ್ನಿಂದ
ಹ ಪ್ರಯೋಜನಮದೇಂ ಮಾಜದಂಜದೆ ತನಗೆ
ಕ್ಷಿಪ್ರದಿಂ ಪೇಳೆಂದು ಭೂವರಂ ಬೆಸಗೊಂಡೊ
ಡಾ ಪಾರ್ವನಿಂತೆಂದನು ॥ ೧೫

ಎನ್ನೊಳಾ ಸಿಂಹವಾಡಿದ ನುಡಿಯನೀಗಳಾಂ
ನಿನ್ನೊಳೆಂಬುದು ನೀತಿಯಾದಪುದೆ ಸುತಹೀನ
ಮಿನ್ನೇಸು ದಾರುಣವೊ ಪೇಳಬೇಕಾಗಿಹುದು
ನೃಪ ಕೇಳದಱ ಮಾತನು
ಮುನ್ನ ಮುದಿಗೂಡು ತಪದಿಂದೊಣಗಿತಿದನೊಲ್ಲೆ
ನುನ್ನಿಸದಿರಾಪೂರ್ಣಡೀವುದು ದಿವ್ಯದುಗ್ಧಸಂ
ಪನ್ನಫಲಪುಷ್ಟಮಾಗಿಹ ಮಯೂರಧ್ವಜನ
ಮೈಯೊಳರ್ಧವನೆಂದುದು ॥ ೧೬

ಈ ಮಗನ ಮೇಲೆ ನಿನಗಾಸೆಯುಳ್ಳೊಡೆ ಬಿಡುವೆ
ನಾ ಮಯೂರಧ್ವಜನ ದೇಹಾರ್ಧಮಂ ಕೊಂಡು
ಬಾ ಮಹೀಪಾಲನಲ್ಲಿಗೆ ಪೋಗು ಕೊಲ್ಲೆನಾ
ನನ್ನಿಗಂ ನಡೆಯೆನಲ್ಕೆ
ಭೂಮೀಶನಿತ್ತಪನೆ ತನ್ನ ತನುಭಾಗಮಂ
ಭ್ರಾಮಕಮಿದೆಂದು ಜಱೆದಾಂ ತಿರಸ್ಕರಿಸೆ ಮ
ತ್ತೀ ಮಾತನಾಡಿದುದು ತನ್ನೊಳಾ ಕೇಸರಿ ನ
ರೇಂದ್ರ ಕೇಳ್ ಕೌತುಕವನು ॥ ೧೭

ಎಲೆ ಮರುಳೆ ವಿಪ್ರ ಪರಪುರುಷಾರ್ಥಕೆಳಸುವಂ
ನೆಲದ ಮೇಲಣ ಬಾಳ್ಕೆಯುಂ ನಿಜಶರೀರಮಂ
ನೆಲೆಯೆಂದು ನೋಡುವನೆ ಕವಚಮಂ ಕರ್ಣಂ ದ
ಧೀಚಿ ತನ್ನಸ್ಥಿಗಳನು
ಒಲಿದಿತ್ತು ಕೀರ್ತಿಯಂ ತಳೆದುದಿಲ್ಲವೆ ನಿನ್ನ
ಕುಲವುಳಿಯಬೇಕೆಂದು ಪೋಗಿ ನೀಂ ಬೇಡಿದೊಡೆ
ಸಲೆ ಕರುಣದಿಂದಾ ನೃಪಂ ಕಾಯಮಂ ಕೊಯ್ದು
ಕುಡದಿರಂ ಪೋಗೆಂದುದು ॥ ೧೮

ಸುತ್ಯಾಗಿ ಶುಚಿ ಶೂರನುಪಕಾರಿ ಕಮಲಾಕ್ಷ
ಭೃತ್ಯನನಸೂಯಂ ಕೃಪಾವನಧಿ ಭುವನಜನ
ನುತ್ಯಂ ಮಯೂರಧ್ವಜಂ ತನ್ನ ಜೀವನವ
ನಾದೊಡಂ ಬೇಡಿದರ್ಗೆ
ಅತ್ಯಂತ ಹರ್ಷದಿಂದಿತ್ತು ಸತ್ಕೀರ್ತಿಯನ
ನಿತ್ಯಸಂಸಾರದೊಳ್ ಪಡೆದಲ್ಲದಿರ್ದಪನೆ
ಸತ್ಯಮಿದು ಪೋಗೆಂದು ಸಿಂಹಮೆನ್ನಂ ಕಳುಹಿ
ದೊಡೆ ನಿನ್ನೆಡೆಗೆ ಬಂದೆನು ॥ ೧೯

ರಾಯ ನಾಂ ಮೂಢನಲ್ಲವೆ ಸಕಲವೈಭವ
ಶ್ರೀಯುಕ್ತಮಾಗಿರ್ದ ನಿನ್ನ ಘನಸೌಂದರ್ಯ
ಕಾಯಮಂ ಕೊಟ್ಟು ತನ್ನಾತ್ಮಜಂ ಬದುಕಬೇ
ಕೆಂದು ಸಿಂಹದ ಮಾತಿಗೆ
ವಾಯದಿಂ ಬಂದೆನಿಲ್ಲಿಗೆ ಸಾಕದಂತಿರಲ
ಪಾಯಕೊಳಗಾಗಿರ್ದ ತನ್ನ ಸುತನುಳಿವುದಕು
ಪಾಯಮಂ ಕಾಣೆನೆಂದಾ ಕಪಟಭೂಸುರಂ
ಸುಯ್ದು ಮತ್ತಿಂತೆಂದನು ॥ ೨೦

ಭೂಸುರಂ ಬ್ರಹ್ಮಚರ್ಯೆಯೊಳಿರ್ದ ಪುತ್ರಂ ಗ
ತಾಸುವಾದೊಡೆ ರಾಮಚಂದ್ರಂಗೆ ಮೊಱೆಯಿಟ್ಟೊ
ಡಾ ಸುತನ ಜೀವಮಂ ಬರಿಸನೇ ಪೌರುಷದೊ
ಳಾ ರಾಘವೇಶ್ವರಂಗೆ
ಪಾಸಟಿಯಲಾ ನೀನುಮದಱಿನೆನ್ನಾತ್ಮಜಂ
ಕೇಸರಿಯ ಬಾಯ ತುತ್ತಾದನೀ ದುಃಖದಾ
ಯಾಸಮಂ ನಿನಗೊರೆದೆನಿನ್ನುಳುಹು ಮಾಣೆಂದು
ಕಪಟದ್ವಿಜಂ ನುಡಿದನು ॥ ೨೧

ಕೇಳ್ದನವನೀಶ್ವರಂ ಪ್ರಚ್ಛನ್ನಭೂಸುರಂ
ಪೇಳ್ದ ವೃತ್ತಾಂತಮಂ ಕೀರ್ತಿ ನಿಲ್ವುದು ನರರ
ಬಾಳ್ ದಿಟಮಿದಲ್ಲೆಂದು ನಿಶ್ಚೈಸಿ ವಿಪ್ರನಂ
ಕರೆದು ನಿನಗೀ ತನುವನು
ಸೀಳ್ದು ಕೊಟ್ಟಪೆನೆಂದಭಯವಿತ್ತು ಬಳಿಕ ತಾ
ನಾಳ್ದಿಳೆಯನಾತ್ಮಜಂಗಪ್ಪೈಸಿ ಹರ್ಷಮಂ
ತಾಳ್ದನಿಬರೆಲ್ಲರಂ ಮಂಟಪದೊಳಿಹುದೆಂದು
ಕುಳ್ಳಿರಿಸಿ ಪೊಱಮಟ್ಟನು ॥ ೨೨

ತರಿಸಿ ಗಂಗಾತೋಯವಮಂ ಮಜ್ಜನಂಗೈದು
ಪರಮ ಸಾಲಗ್ರಾಮತೀರ್ಥವಮಂ ಕೈಕೊಂಡು
ತರುಣತುಲಸೀದಳದ ಮಾಲೆಯಂ ಕಂಧರದೊ
ಳಾಂತು ಮಂಟಪಕೆ ಬಂದು
ನೆರೆದ ಭೂಸುರಸಭೆಗೆ ಸಾಷ್ಟಾಂಗದಿಂದೆಱಗಿ
ಕರಯುಗಳವಮಂ ಮುಗಿದು ನಿಂದು ಬಿನ್ನೈಸಿದಂ
ಧರಣೀಶ್ವರಾಗ್ರಣಿ ಮಯೂರಧ್ವಜಂ ಜನಾ
ಧೀಶ ಕೇಳ್ ಕೌತುಕವನು ॥ ೨೩

ಈ ಮಹಾಸ್ಥಾನದೊಳ್ ನೆರೆದಖಿಳಭೂಸುರ
ಸ್ತೋಮಂ ನಿರೀಕ್ಷಿಸುವುದಂದು ಬಲಿಯಧ್ವರಕೆ
ವಾಮನಂ ಬಂದಂತೆ ತನ್ನ ಮಖಕೀ ದ್ವಿಜಂ
ತಾನೆ ಬಿಜಯಂಗೈದನು
ಶ್ರೀಮಾಧವಸ್ವರೂಪದೊಳೀಗಳರಿದು ತ
ನ್ನೀ ಮೈಯೊಳರ್ಧಮಂ ಕೊಯ್ದು ಕೊಟ್ಟಪೆನತಿ
ಪ್ರೇಮದಿಂದೀತಂಗೆ ಬದುಕಲೀತನ ಸುತಂ
ಪೊಸತಾಗಲಿಳೆಗೆಂದನು ॥ ೨೪

ಭೂನಾಥನೆಂದ ಮಾತಂ ಕೇಳ್ದು ಸಕಲಪ್ರ
ಧಾನಿಗಳುಮರಸನ ಪುರೋಹಿತರುಮಾ ದ್ವಿಜರು
ಮೇನಿದೆತ್ತಣ ಕೃತ್ಯಮೀ ವಿಪ್ರನಂತಕೋ
ಪಮನೆಂದು ಭೀತಿಯಿಂದೆ
ದಾನಮೆಂದೊಡೆ ರಾಜ್ಯಲಕ್ಷ್ಮಿ ಧನಕನಕಮಣಿ
ಧೇನುಗಳನೀವರೀ ಕಾಯಮಂ ಕೊಯ್ದು ಕುಡು
ವೀ ನಿಮಿತ್ತವನಱಿಯೆವೆಂದೆಲ್ಲರುಂ ಕಂಪಿ
ಸಲ್ ನೃಪತಿಯಿಂತೆಂದನು ॥ ೨೫

ಯಾಚಿಸಿದನಂಗಮಂ ಸುತನನುಳುಹೆಂದೆನಗೆ
ಸೂಚಿಸಿದನೀ ದ್ವಿಜಂ ತಾಂ ಕೊಡುವೆನೆಂದೊಡನೆ
ವಾಚಿಸಿದೆನಿಂತಿದಕೆ ತಪ್ಪಿದೊಡೆ ಲೋಕದೊಳ್
ತನ್ನಂ ಸಮಸ್ತಜನರು
ನಾಚಿಸದೆ ಮಾಣ್ದಪರೆ ಪುಸಿದೊಡಂತಕನವರ್
ಪಾಚಿಸರೆ ನರಕದೊಳ್ ವ್ಯೈಯನರಿದೀಯುಲಾ
ಳೋಚಿಸಲದೇಕಿನ್ನು ತೊಲಗಿ ನೀವೆಂದು ನೃಪ
ನನಿಬರಂ ಸೈತಿಟ್ಟನು ‖ ೨೬

ಆ ಮಯೂರಧ್ವಜಂ ಬಳಿಕಲ್ಲಿ ವಿಪ್ರರಂ
ಹೇಮ ಮಣಿ ಗಜ ತುರಗ ವಸ್ತ್ರ ಭೂಷಣ ಧೇನು
ಭೂಮಿ ದಾನಂಗಳಿಂ ತಣಿಸಿ ನಡಿಸಿದನೆರಡು
ಕಂಬಮಂ ನಡುವೆ ತನ್ನ
ಕೋಮಲಶರೀರಮಂ ಪುಗಿಸಿ ಕಾಂಚನಮಯ ಸು
ದಾಮದಿಂ ತೋಳ್‌ತೊಡೆಗಳಂ ಬಿಗಿಸಿಕೊಂಡು ನಿಂ
ದಾ ಮಹೀಸುರನ ಪದಕಮಲಂಗಳಂ ತೊಳೆದು
ಸಾದರದೊಳಿಂತೆಂದನು ‖ ೨೭

ಭೂಸುರೋತ್ತಮ ನಿನಗೆ ತಾಂ ಕುಡುವ ದೇಹಾರ್ಧ
ದೀ ಸುದಾನದೊಳಖಿಲಯಜ್ಞನಾಯಕನಾದ
ವಾಸುದೇವಂ ಪ್ರೀತನಾಗಲಸ್ಮತ್ಕುಲೋ
ದ್ಭವರಾದ ಜೀವಿಗಳೊಳು
ಲೇಸಿಂದೆ ಪಾರ್ವಂಗೆ ತನುಧನವನೀವೆಡೆಯೊ
ಳೋಸರಿಸದಿರಲಿ ಬುದ್ಧಿಗಳೆಂದು ನೃಪತಿ ಕ
ಟ್ಟಾಸುರದ ಕೊಯ್ಗಾಱರಂ ಕರಸಿ ತೆಗೆಸಿದಂ
ಮಸೆದ ಕೊಯ್ಗತ್ತಿಗಳನು ‖ ೨೮

ಕುಡುವನಿರೆ ತನಗೆ ಬೇಕಾದುದಂ ಬೇಡುವಂ
ಬಿಡುವನೇ ಬೇಡುವಂ ಬರೆ ತನ್ನೊಳಿರ್ದುದಂ
ತಡೆದಪನೆ ಕುಡುವವಂ ಕುಡುವ ಬೇಡುವರೊಳಗೆ
ಕುಡೆನೆಂಬ ಬೇಡೆನೆಂಬ
ಎಡೆತಡೆಗಳಿಲ್ಲೆಂಬ ನಾಳ್ನುಡಿಯುನೀ ಪಾರ್ವ
ಪೊಡವೀಶರೊಳ್ ಕಂಡೆವೆಂದು ನಡನಡುಗಿ ಮೊಱೆ
ಯಿಡುತಿರ್ದುದವನ ರಾಷ್ಟ್ರದ ಜನಂ ಬೆದಱೆ ಕ್ರೂರ
ರೀಗಣಂಗಳ ತೆಱದೊಳು ‖ ೨೯

ಪೂರ್ವಮುಂ ನೆನೆದು ಕಂಬನಿಗಳಿಂ ಧ್ವನಿಗಳಿಂ
ಚೀರ್ವರಂ ಪ್ರಜೆಗಳಂ ಪಾಲಿಸದೆ ಲಾಲಿಸದೆ
ಜಾರ್ವ ಪರಿಯೆಂತೆಂದಳಲ್ವರಂ ನಿಲ್ವರಂ
ಬೆಱಗಾಗಿ ಬೆಗಡುಗೊಂಡು
ಸಾರ್ವಭೌಮಕ ನಿನ್ನ ರಕ್ಷೆಯಂ ಶಿಕ್ಷೆಯಂ
ಮೀರ್ವರಲ್ಲೆಮ್ಮ ನೀಂ ಬಿಡುವರೇ ಕುಡುವರೇ
ಪಾರ್ವಂಗಸುವನೆಂದು ಬಯ್ವರಂ ಸುಯ್ವರಂ
ನೋಡಿ ನೃಪನಿಂತೆಂದನು ‖ ೩೦

ಪ್ರಜೆಗಳಿರ ನೀವಿದಕೆ ದುಃಖಿಪಿರೆ ಧನ್ಯನಾಂ
ನಿಜಶರೀರದೊಳರ್ಧಮುಂ ಕೊಯ್ದು ಕುಡುವೆನೀ
ದ್ವಿಜನ ಹಸ್ತದೊಳಿವಂ ನೃಹರಿಯೆಂದೀತನಡ
ವಿಯ ಸಿಂಹಕೀಯುಲಿದನು
ಗಜಬಜವಿದೇತಕೆ ಪರೋಪಕೃತಿಗಲ್ಲದ ಮ
ನುಜನ ಬಾಳ್ ಸಣಬುರಿದ ಬೂದಿಯಂತಪ್ಪುದಾ
ರಜಮಿಲ್ಲದೀಕ್ಷಿಪುದು ಕೌತುಕವನೆಂದೊಡಂ
ಬಡಿಸಿದಂ ನರನಾಥನು ‖ ೩೧

ಮತ್ತೆ ಮನುಜೇಂದ್ರನಾ ವಿಪ್ರನಂ ಕರೆದು ನಿನ
ಗಿತ್ತೆನೀ ದೇಹಾರ್ಧಮಂ ಪರಿಗ್ರಹಿಸೆಂದು
ಚಿತ್ತದೊಳ್ ಮಿಗೆ ಹರ್ಷಮಂ ತಾಳ್ದು ಪೊರೆಯೊಳಿಹ
ಸೂದಕರ್ಮಜ್ಞರೊಡನೆ
ಪೊತ್ತು ಕಳೆಯದೆ ತನ್ನ ತನುವನೆರಡಾಗಿ ಮಸೆ
ವೆತ್ತ ಕರಪತ್ರದಿಂ ಸೀಳ್ವುದೆಂದಾಜ್ಞಾಪಿ
ಸುತ್ತಿರೆ ಶಿಖಿಧ್ವಜನ ಸತಿ ಕುಮುದ್ವತಿ ನುಡಿದ
ಳತಿವಿನಯದಿಂದೆ ಪತಿಗೆ || ೨೨

ನೀಂ ತಿಳಿದುದಿಲ್ಲರಸ ವಿಪ್ರೇಂದ್ರನಱಿಯಂ ವ
ನಾಂತರದೊಳಾ ಸಿಂಹಮೆಂದ ನುಡಿ ಶಾಸ್ತ್ರಸಿ
ದ್ಧಾಂತಮಂಗನೆ ಪುರುಷನರ್ಧಾಂಗಮೆಂಬುದಕೆ
ನಿನ್ನ ವಾಮಾಂಗಿಯಾದ
ಕಾಂತೆಯಂ ಬೇಡಿದೊಡೆ ಕೊಯ್ದು ಕಾಯುವನೀವ
ಭ್ರಾಂತಿಯೇತಕೆ ತನ್ನಯಸುವೆರಸಿ ಕೊಟ್ಟು ಕಳೆ
ತಾಂ ತಳೆವೆನೈದೆತನದಿಂದೆ ಸದ್ಗತಿಯನೆಂ
ದಾ ಕುಮುದ್ವತಿ ನುಡಿದಳು || ೨೩

ಸಮ್ಮತಮಿದಹುದೆಂದರೆಲ್ಲರುಂ ಭೂವರಂ
ಸುಮ್ಮನಿರೆ ಕಂಡನೀ ತೆಱನಂ ದ್ವಿಜತ್ವಮಂ
ನೆಮ್ಮಿದ ಮುಕುಂದನೆಲೆ ರಾಯ ನಿನ್ನರಸಿ ನುಡಿ
ದುತ್ತರವನೊಪ್ಪಬಹುದು
ಸುಮ್ಮಾನದಿಂ ಜನೇಶ್ವರನ ದಕ್ಷಿಣಭಾಗ
ಮಂ ಮೆಲ್ವೆನೆಂದುವೊಕ್ಕಣಿಸಿತಲ್ಲದೆ ಸಿಂಹ
ಮೆಮ್ಮೊಡನೆ ವಾಮಾಂಗಮೆಂದಾಡಿತಿಲ್ಲೆನಲ್
ನೃಪನ ಸುತನಿಂತೆಂದನು || ೨೪

ಕರುಣಿಸೆಲೆ ವಿಪ್ರ ನಿನ್ನಂ ಬೇಡಿಕೊಂಬೆನಾಂ
ತರುಣಂ ಸುಪುಷ್ಟವಪು ತುಷ್ಟಿ ಮೃಗಪತಿಗಾಗ
ದಿರದು ತಾತನ ಋಣತ್ರಯಕೆ ಹಱಿವಹುದು ರಾ
ಘವ ಭೀಷ್ಮರಂತೆ ಕೀರ್ತಿ
ಸ್ಥಿರವಹುದು ಪಿತನ ಭಾಷೆಗೆ ನಿಲಲ್ ಜನಕನವ
ತರಿಪನಾತ್ಮಜನಾಗಿ ತಂದೆ ಮಕ್ಕಳಿವರೊಳ
ಗೆರವಿಲ್ಲ ತನ್ನಂಗಮಂ ತೆಗೆದುಕೊಳ್ಳೆಂದು
ತಾಮ್ರಧ್ವಜಂ ನುಡಿದನು ॥ ೩೫

ಭೂಪಾಲ ಕೇಳವನ ಮಾತಿಗೆ ಮಹೀಸುರಂ
ಕಾಪಟ್ಯಮಿಲ್ಲೆಲೆ ಕುಮಾರ ನೀನೆಂದ ನುಡಿ
ಪಾಪಿ ಕೇಸರಿ ತನ್ನೊಳವನಿಪನ ಸತಿಯೆಂದು
ಸುತನೆಂದು ಪೇಳ್ದುದಿಲ್ಲ
ಆಪೊಡೆ ಮಯೂರಧ್ವಜನ ದಕ್ಷಿಣಾಂಗಮಂ
ತಾ ಪುತ್ರನಂ ಬಿಡುವೆನೆಂದೊಡಿಲ್ಲಿಗೆ ಬಂದೆ
ನೀ ಪರಿಯೊಳಳುಕುವರೆ ಕುಡಬೇಡ ಪೋಪೆನೆನೆ
ನರನಾಥನಿಂತೆಂದನು ॥ ೩೬

ರಾಣಿಯಂ ಕುಡುವುದಿಲ್ಲಾತ್ಮಜನನೀವುದಿ
ಲ್ಲೂಣೆಯಂ ತನ್ನ ಭಾಷೆಗೆ ಬಾರದಂತಬ್ಜ
ಪಾಣಿ ಮೆಚ್ಚುವೊಲರ್ಧದೇಹಮಂ ಕೊಯ್ದು ಕೊ
ಟ್ಟಪೆನೀಗ ಸೈರಿಸೆನುತೆ
ಸಾಣೆವಿಡಿದಿರ್ದ ಕರಪತ್ರಮಂ ಕುಡಿಸಿದಂ
ಪ್ರಾಣನಾಥೆಯ ಕೈಯೊಳೆನ್ನುತ್ತಮಾಂಗಮಂ
ಕೇಣವಿಲ್ಲದೆ ತನುಜನಂ ಕೂಡಿಕೊಂಡು ನೀಂ
ಸೀಳೆಂದು ನೇಮಿಸಿದನು ॥ ೩೭

ಆ ಮಹೀಪಾಲನೀ ತೆಱದೊಳ್ ಕುಮುದ್ವತಿಗೆ
ನೇಮಿಸೆ ಕುಮಾರನಂ ಕೂಡಿಕೊಂಡವಳತಿ
ಪ್ರೇಮದಿಂ ಕರಪತ್ರಮಂ ಕೊಂಡು ಮುನ್ನ ದೈ
ತ್ಯನನಿಂತು ಸೀಳ್ದನೆಂದು
ಆ ಮಹಾಸಭೆ ನಾರಸಿಂಹನಂ ನೆನೆವಂತೆ
ರಾಮ ರಾಮೆಂದು ಜಪಿಸುತೆ ಕೊಯ್ದಳವನಿಪ ಶಿ
ರೋಮಣಿಯ ಮಸ್ತಕವನೆರಡಾಗಿ ಸರಿಸದಿಂ
ದೋರೆಪೋರೆಗಳಿಲ್ಲದೆ ‖ ೩೮

ಸ್ತಂಭದ್ವಯದ ನಡುವೆ ನಿಂದ ನೃಪನಂ ತನ್ನ
ಸಂಭವನುಮರಸಿಯುಂ ಪಿಡಿದೊಬ್ಬರೊಂದು ಕಡೆ
ಯಿಂ ಭಾಳಮಧ್ಯಮಂ ತೀಕ್ಷ್ಣಕರಪತ್ರದಿಂ
ಘರಘರನೆ ಸೀಳುತಿರಲು
ಜಂಭರಿಪುನಂದನಮುರಾರಿಗಳ್ ಬೆಱಗಾದ
ರಂಭೋಧಿಘೋಷದಿಂದೆದ್ದ ಹಾಹಾಕಾರ
ದಿಂ ಭಯಂಗೊಂಡೊಱಲುತಿರ್ದುದಾಸ್ಥಾನಮೆಲೆ
ಭೂಪ ಕೇಳ್ ಕೌತುಕವನು ‖ ೩೯

ಪೆಂಡಿತಿಯೊಳಾತ್ಮಜನೊಳರಸನೊಳ್ ಮಿಗೆ ನೋಡಿ
ಕಂಡುದಿಲ್ಲೊಂದಿನಿಸು ಖಯಖೋಡಿಯಂ ಬಳಿಕ
ಪುಂಡರೀಕಾಂಬಕಂ ನೃಪನ ವಾಮಾಕ್ಷಿಯೊಳ್
ಕಂಬನಿಗಳೊಸರುತಿರಲು
ಅಂಡಲೆಯೊಳಳುತಳುತೆ ಕುಡುವವನ ದಾನಮಂ
ಕೊಂಡಪರೆ ಬುಧರಕಟ ಲೋಕದೊಳ್ ಬೇಡುವಂ
ಭಂಡನೆನುತೊಡಮುರಿದು ತಿರುಗಿದಂ ತನಯನಂ
ತಿನಲಿ ಹರಿ ಬನದೊಳೆನುತೆ ‖ ೪೦

ಬೆಱಗಾದಳಾ ಕುಮುದ್ವತಿ ನುಡಿದಳರಸಂಗೆ
ಬಱಿದೆ ಕೊಯ್ಸಿದೆ ನಿನ್ನ ಮಸ್ತಕವನೆಡಗಣ್ಣೊ
ಳೊಱೆವ ಕಂಬನಿಗಳಂ ಕಂಡಾ ದ್ವಿಜೋತ್ತಮಂ
ನೀನಳುತೆ ಕುಡುವೆಯೆಂದು
ಪೊಱಮಟ್ಟು ಪೋದನೊಲ್ಲದೆ ವಿಫಲಮಾದುದ
ಕ್ಕಱೊಳಿತ್ತ ದಾನಮಿದಕೆಂತೆನಲ್ ಭೂವರಂ
ಮಱುಗಿ ಕರಸಾತನಂ ತಿಳಿಪುವೆಂ ಪೋಳ್ಗಳೆರ
ಡಂ ಕೂಡಿ ಪಿಡಿಯೆಂದನು ॥ ೪೧

ಬಳಿಕಾ ಕುಮುದ್ವತಿ ನರೇಂದ್ರಮಸ್ತಕದ ಪೋ
ಳ್ಗಳನೊಂದುಗೂಡಿ ಪಿಡಿದಾಗ ನಿಜತನಯನಂ
ಕಳುಹಲವನಾ ಪಾರ್ವನಂ ತಡೆದೊಡಂಬಡಿಸಿ
ವಿನಯದಿಂ ಕರೆತರಲ್ಕೆ
ತಿಳಿಪಿದಂ ಭೂಪನೆಲೆ ವಿಪ್ರ ಕರಪತ್ರಹತಿ
ಗಳುಕಿತಿಲ್ಲುಪಕಾರಕಾಯ್ತು ದಕ್ಷಿಣಭಾಗ
ಮುಳಿದುದು ನಿರರ್ಥಕಂ ವಾಮಾಂಗಮೆಂದೊಸರಿ
ತೆಡಗಣ್ಣ ಜಲಮೆಂದನು ॥ ೪೨

ಮೆಚ್ಚಿದಂ ನೃಪನೆಂದ ಮಾತಿಗೆ ಮುರಧ್ವಂಸಿ
ಹಚ್ಚಿರ್ದ ರಾಯನ ಕಳೇಬರದ ಪೋಳ್ಗಳಂ
ಬೆಚ್ಚು ಕಾರುಣ್ಯದಿಂ ಮೈದಡವಿ ತಕ್ಕೈಸಿ
ನಿನ್ನಂ ಪರೀಕ್ಷಿಸಿದೆಸು
ನಿಚ್ಚಟದ ಭಕ್ತಿಯಂ ಕಂಡೆನಿವನರ್ಜುನಂ
ಮುಚ್ಚುಮಱೆಯೇಕಿನ್ನು ತಾನೀಗ ಕೃಷ್ಣನೆಂ
ದೆಚ್ಚಱಿಸಿ ನಿಗಮದಱಿಕೆಯ ತನ್ನ ಸಾಕಾರ
ಮೂರ್ತಿಯಂ ತೋಱಿಸಿದನು ॥ ೪೩

ವರ ಸುಪ್ರಸನ್ನವದನದ ಕಮಲನೇತ್ರದ ಮ
ಕರಕುಂಡಲದ ಲಲಿತನಾಸಿಕದ ಪಣೆಯ ಕ
ಸ್ತುರಿಯ ತಿಲಕದ ಮುರಿದ ಪುರ್ಬುಗಳ ಸುಳಿಗುರುಳ
ಮಣಿಮುಕುಟದೆಳದೊಳಸಿಯು
ಕೊರಲ ವನಮಾಲಿಗಳ ಕೌಸ್ತುಭ ಶ್ರೀವತ್ಸ
ದುರದ ಚಂದನದ ನಳಿತೋಳ್ಗಳ ಘನಾಂಗ ಸೌಂ
ದರಿಯದವಯವದ ಸರ್ವಾಭರಣಭೂಷಿತದ
ಹರಿ ನೃಪನ ಮುಂದೆಸೆದನು || ೪೪

ಹೇಮಾಂಬರದ ಲಲಿತಕಾಂತಿ ಹೊಳೆಹೊಳೆವ ಸೌ
ದಾಮಿನಿವೊಲಿರೆ ಪೊರೆದ ಕರುಣರಸವೊಸರ್ವ ಧಾ
ರಾಮಯದ ಮಳೆವೊಲಿರೆ ನುಡಿವ ಗಂಭೀರವಾ
ಕ್ಯಂ ಕೂಡೆ ಮೊಳಗುವೊಲಿರೆ
ಕೋಮಲಶ್ಯಾಮ ಲಾವಣ್ಯತನು ಮುಂಗಾರ
ಜೀಮೂತದೊಡ್ಡಿನವೊಲಿರೆ ಪಿರಿದು ನಲಿಯುದಿಹ
ನೇ ಮಯೂರಧ್ವಜಂ ಪೇಳೆನಲ್ ಕೃಷ್ಣನಂ
ಕಂಡು ಪುಳಕಿತನಾದನು || ೪೫

ಜಯ ಜಯ ಜಗನ್ನಾಥ ವರ ಸುಪರ್ಣವರೂಥ
ಜಯ ಜಯ ರಮಾಕಾಂತ ಶಮಿತದುರಿತಧ್ವಾಂತ
ಜಯ ಜಯ ಸುರಾಧೀಶ ನಿಗಮನಿರ್ಮಲಕೋಶ
ಕೋಟಿಸೂರ್ಯಪ್ರಕಾಶ
ಜಯ ಜಯ ಕ್ರತುಪಾಲ ತರುಣತುಲಸೀಮಾಲ
ಜಯ ಜಯ ಕ್ಷ್ಮಾಪೇಂದ್ರ ಸಕಲಸದ್ಗುಣಸಾಂದ್ರ
ಜಯತು ಜಯ ಯದುರಾಜ ಭಕ್ತಸುಮನೋಭೂಜ
ಜಯತು ಜಯಯೆನುತಿರ್ದನು || ೪೬

ನೋಡಿದಂ ಕಣ್ ತಣಿಯೆ ಬಳಿಕಿಳೆಗೆ ತನುವನೀ
ಡಾಡಿ ದಂಡಪ್ರಣಾಮಂಗೈದು ಭೂವರಂ
ಮಾಡಿದಂ ನಿಗಮಾರ್ಥದನುಪಮಸ್ತುತಿಗಳಂ
ಮುರಹರನ ಮುಂದೆ ನಿಂದು
ಕೂಡೆ ತಾಮ್ರಧ್ವಜ ಕುಮುದ್ವತಿಗಳೆಱಗಿದರ್
ಮೂಡಿದಾನಂದದಿಂ ತಮತಮಗೆ ಕೈಮುಗಿದು
ಬೇಡಿಕೊಳುತಿರ್ದುದು ಮಹಾಸಭೆ ಮುಕುಂದನಂ
ಜಯ ಜಯ ನಿನಾದದಿಂದೆ || ೪೭

ಪನ್ನಗಾರಿಧ್ವಜಂ ಬಳಿಕಾ ನೃಪಾಲನಂ
ಮನ್ನಿಸಿ ಕೃತಾರ್ಥನಹೆ ನೀನರ್ಥದೇಹಮಂ
ನನ್ನಿಯಿಂದೀಯೆ ಮೆಚ್ಚಿದೆನೀಗ ನಿನಗೆ ಸಂ
ಗ್ರಾಮದೊಳ್ ತಾಮ್ರಕೇತು
ನಿನ್ನೆ ಪಡೆಯೆಲ್ಲಮುಮನೀ ಸವ್ಯಸಾಚಿಯುಮ
ನೆನ್ನುವಂ ಮೂರ್ಛೆಗಾಣಿಸಿ ಕೆಡಹಿ ಬಂದುದಕೆ
ಮುನ್ನೆ ಹರ್ಷಿತನಾದೆನಿನ್ನು ಸತಿಸುತರೊಡನೆ
ಮಾಡು ಯಜ್ಞವನೆಂದನು || ೪೮

ಧರ್ಮಜನ ತುರಗಮಿದೆ ನಿನ್ನ ಹಯಮಿದೆ ನೀನೆ
ನಿರ್ಮಲಾಧ್ವರಮೆರಡುಮಂ ಸಮಯಮಾಗಲ್ಕೆ
ಕರ್ಮಕಧಿಪತಿಯಾಗಿ ಮಾಳ್ಪುದೆಂದಚ್ಯುತಂ
ನುಡಿದೊಡೆ ಮಯೂರಕೇತು
ಚರ್ಮಶೃಂಗಮನಾಂತು ಮಖದೀಕ್ಷೆಯಂ ಕೊಂಬ
ದುರ್ಮತಿಗಳುಂಟೆ ನಿನ್ನಂ ಕಂಡ ಬಳಿಕದಱ
ಮರ್ಮಮಂ ಬಲ್ಲೆನಾನೆಲೆ ದೇವ ತನ್ನ ಬಿ
ನ್ನಪವನವಧರಿಸೆಂದನು || ೪೯

ವಿಶ್ವೇಶ ನಿನ್ನ ಶಾಶ್ವತಮೂರ್ತಿಯಂ ತಳೆವ
ವಿಶ್ವಾಸದಿಂದೆ ನಿನಗೊಪ್ಪಿಸಿದೆನೀಗಳೀ
ನಶ್ವರ ಶರೀರಮಂ ಸಾಕದಂತಿರಲಿನ್ನು
ತಾಂ ಕರ್ಮಕರ್ತೃವಾಗಿ
ಅಶ್ವಮೇಧಂಗಳಂ ಮಾಡಿದೊಡೆ ನಗವೆ ನಿ
ನ್ನ ಶ್ವಾಸದಿಂದೊಗೆದ ಮಂತ್ರಾಳಿಗಳ್ ಮಾತ
ರಿಶ್ವಮಿತ್ರಜ್ವಾಲೆ ಪೊರೆಯೊಳಿರೆ ಭೇಷಜವ
ನಱಿಸುವರೆ ಹಿಮುಕೆಂದನು || ೫೦

ದೇವ ಚಿತ್ತೈಸೆನ್ನ ನಂದನಂ ನಿನ್ನೆ ಸಮ
ರಾವನಿಯೊಳೊಳಗಾದ ನಿಮ್ಮೀರ್ವರಂ ಬಿಟ್ಟ
ಭಾವದಿಂ ಬಂದನಿಲ್ಲಿಗೆ ತನ್ನ ಪುಣ್ಯದಿಂ
ತನಗನುಗ್ರಹಿಸಲೆಂದು
ನೀವೆ ಬಿಜಯಂಗೈದಿರದಱಿಂದೆ ಸಲೆ ಧನ್ಯ
ರಾವು ನರನಾರಾಯಣರ್ಕಳಂ ಕಂಡೆವಿ
ನ್ನಾವ ಕಲ್ಪಿತವೆನಗೆ ಧರ್ಮಜನೆ ಮಾಡಿ ಬದು
ಕಲಿ ಮಖಂಗಳನೆಂದನು || ೫೧

ಸುರನದಿಯ ತೋಯಮಿರೆ ನೀರಡಿಸಿ ಹಿಮುಜಲಕೆ
ಪರಿವಂತೆ ನಿನ್ನ ದರ್ಶನಮಿರ್ದುಮೀ ಮಹಾ
ಧ್ವರಕೆಳಸುವವನಲ್ಲ ತನ್ನುಮಂ ತನ್ನ ಸತಿ
ಸುತರುಮಂ ತನ್ನೊಳಿರ್ದ
ತುರಗಂಗಳಂ ತನ್ನ ಯಜ್ಞಮಂ ಯಜ್ಞೋಪ
ಕರಣಂಗಳಂ ತನ್ನ ರಾಜ್ಯಮಂ ತನ್ನ ಮಂ
ದಿರದ ಸರ್ವಸ್ವಮಂ ನಿನ್ನ ಪದಕರ್ಪಿಸಿದೆ
ನೆಂದವಂ ಕೈಮುಗಿದನು || ೫೨

ಇಂತೆಂದು ಭೂವರಂ ನುಡಿಯೆ ಹರ್ಷಿತನಾಗಿ
ಕುಂತೀಸುತಂಗವನ ಭಕ್ತಿಯಂ ತೋಱಿಸುತ
ನಂತರದೊಳಾ ನೃಪನ ನಗರದೊಳ್ ಮೂಱು ದಿನ
ಮಿರ್ದು ನಿಜಸೇನೆ ಬರಲು
ದಂತಿಪುರಕಲ್ಲಿಯ ಸಮಸ್ತವಸ್ತುಗಳೈದು
ವಂತೆ ನೇಮಿಸಿ ಮಯೂರಧ್ವಜಂ ಸಹಿತ ನಡೆ
ದಂ ತುರಗಮೆರಡುಮಂ ಬಿಡಿಸಿ ಮುಂದಕೆ ದೇವ
ಪುರದ ಲಕ್ಷ್ಮೀಕಾಂತನು ॥ ೫೩

೮

## ಸರ್ವಜ್ಞ : 'ವಚನಗಳು'

ಈವಂಗೆ ದೇವಂಗೆ । ಆವುದಂತರವಯ್ಯ
ದೇವನು ಜಗಕೆ ಕೊಡುತಿಹನು ಕೈಯಾರೆ
ಈವನೇ ದೇವ ಸರ್ವಜ್ಞ ॥ ೧

ಸಿರಿ ಬಂದ ಕಾಲಕ್ಕೆ । ಕರೆದು ದಾನವ ಮಾಡು
ಪರಿಣಾಮವಕ್ಕು ಪದವಕ್ಕು ಕೈಲಾಸ
ನೆರೆಮನೆಯು ಅಕ್ಕು ಸರ್ವಜ್ಞ ॥ ೨

ಹುಟ್ಟುವಾಗೀ ಧನವ । ಮೊಟ್ಟೆಗಟ್ಟಿಳಿದಿಹನೆ
ಕಟ್ಟಕಡೆಯಲ್ಲಿ ಕೊಂಡೊಯ್ಯನಿದನರಿದು
ಕೊಟ್ಟುಂಬ ದಾನಿ ಸರ್ವಜ್ಞ ॥ ೩

ಕೊಟ್ಟದ್ದು ತನಗೆ ಬ । ಚ್ಚಿಟ್ಟದ್ದು ಪರರಿಂಗೆ
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ
ಕಟ್ಟಿಹುದು ಬುತ್ತಿ ಸರ್ವಜ್ಞ ॥ ೪

ಸೊಡರೆಣ್ಣೆ ತೀರಿದರೆ । ಕೊಡನೆತ್ತಿ ಹೊಯ್ಯುವರೆ
ಕೊಡಬೇಡ ಕೊಡದೆ ಇರಬೇಡ ಧರ್ಮವನು
ಬಿಡಬೇಡವೆಂದ ಸರ್ವಜ್ಞ ॥ ೫

ಇಚ್ಛೆಯನು ಅಱಿದಿತ್ತ । ನುಚ್ಚೊಂದು ಮಾಣಿಕವು
ಇಚ್ಛೆಯದು ತೀರ್ದ ಬಳಿಕಿತ್ತ ಮದಕರಿಯು
ನುಚ್ಚಿಗುಂ ಕಷ್ಟ ಸರ್ವಜ್ಞ ॥ ೬

ಉಣ್ಣದೊಡವೆಯ ಗಳಿಸಿ । ಮಣ್ಣಿನೊಳು ತಾನಿರಿಸಿ
ಸಣ್ಣಿಸಿಯೆ ನೆಲನ ಸಾರಿದನ ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ ॥ ೭

ಉಣ್ಣೆ ಕೆಚ್ಚಲೊಳಿರ್ದು । ಉಣ್ಣದದು ನೊರೆಹಾಲ
ಪುಣ್ಯವನು ಮಾಡಿ ಉಣಲೊಲ್ಲದವನಿರವು
ಉಣ್ಣೆಯಿಂ ಕಷ್ಟ ಸರ್ವಜ್ಞ ॥ ೮

ಸತ್ಯರಿಗೆ ಧರೆಯೆಲ್ಲ । ಮಸ್ತಕವನೆಱಗುವುದು
ಹೆತ್ತ ತಾಯ್ ಮಗನ ಕರೆವಂತೆ ಶಿವನವರ
ನೆತ್ತಿಕೊಂಬುವನು ಸರ್ವಜ್ಞ ॥ ೯

ಒಳ್ಳೆಯನು ಇರದೂರು । ಕಳ್ಳನೊಡನಾಟವು
ಸುಳ್ಳನಾ ಮಾತು ಇವು ಮೂಱು ಕೆಸಱೊಳಗೆ
ಮುಳ್ಳು ತುಳಿದಂತೆ ಸರ್ವಜ್ಞ ॥ ೧೦

ಮುತ್ತು ನೀರಲಿ ಹುಟ್ಟಿ । ಹತ್ತುಸಾಸಿರ ಹಡೆಗು
ಹತ್ತು ಚಿಪ್ಪೊಂದು ಹಣಮಿಲ್ಲ ತಾಯ್ತಂದೆ
ಎತ್ತಣವರೆಂದ ಸರ್ವಜ್ಞ ॥ ೧೧

ಉದ್ದುರುಟು ಮಾತಾಡಿ । ಇದ್ದುದನು ಹೋಗಾಡಿ
ಉದ್ದನಾ ಮರದ ತುದಿಗೇಱಿ ತಲೆಯೂಱಿ
ಬಿದ್ದು ಸತ್ತಂತೆ ಸರ್ವಜ್ಞ ॥ ೧೨

ಧನಕನಕವುಳ್ಳನಕ । ದಿನಕರನವೋಲಕ್ಕು
ಧನಕನಕ ಹೋದ ಮಱುದಿನವೆ ಹಾಳೂರ
ಶುನಕನಂತಕ್ಕು ಸರ್ವಜ್ಞ ॥ ೧೩

ಕಂಡುದನು ಆಡೆ ಭೂ । ಮಂಡಲವು ಮುನಿಯುವುದು
ಕೊಂಡಾಡುತಿಚ್ಛೆ ನುಡಿದಿಹರೆ ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ ॥ ೧೪

ಉತ್ತರೆಯು ಬಱಿತಿಹರೆ । ಹೆತ್ತ ತಾಯ್ ತೊಱೆದಿಹರೆ
ಸತ್ಯರುಂ ತಪ್ಪಿ ನಡೆದಿಹರೆ ಲೋಕ ತಾ
ನೆತ್ತ ಸೇರುವುದು ಸರ್ವಜ್ಞ ॥ ೧೫

ಉಳ್ಳವನು ನುಡಿದಿಹರೆ । ಒಳ್ಳಿತೆಂದೆನ್ನುವರು
ಇಲ್ಲದಾ ಬಡವ ನುಡಿದಿಹರೆ ಬಾಯೊಳಗೆ
ಹಳ್ಳು ಕಡಿದಂತೆ ಸರ್ವಜ್ಞ ॥ ೧೬

ಕಣ್ಣು ಸಣ್ಣದು ತಾನು । ಹಣ್ಣದಿಹುದೊಂದಿಲ್ಲ
ತಣ್ಣಗಿಹ ಮನವನುರಿಸುವುದು ಇದನು ಕೊಂ
ದಣ್ಣಗಳು ಆರು ಸರ್ವಜ್ಞ ॥ ೧೭

ಕಣ್ಣು ನಾಲಗೆ ಮನವು । ತನ್ನದೆಂದೆನಬೇಡ
ಅನ್ಯರೇ ಕೊಂದರೆನಬೇಡ ಇವು ಮೂಱು
ತನ್ನ ಕೊಲ್ಲುವುವು ಸರ್ವಜ್ಞ ॥ ೧೮

ಮಾತ ಬಲ್ಲಾತಂಗೆ । ಯಾತವದು ಸುರಿದಂತೆ
ಮಾತಾಡಲಱಿಯದಾತಂಗೆ ಬಱಿಯಾತ
ನೇತಾಡಿದಂತೆ ಸರ್ವಜ್ಞ ॥ ೧೯

ಸಾಲವನು ಕೊಂಬಾಗ । ಹಾಲುಹಣ್ಣುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲು ಮುಱಿದಂತೆ ಸರ್ವಜ್ಞ ॥ ೨೦

ನುಡಿಯಲ್ಲಿ ಎಚ್ಚತ್ತು । ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಧರ್ಮ ಹೊಡೆಮರಳಿ ಕಚ್ಚುವಾ
ಹೆಡೆನಾಗ ನೋಡ ಸರ್ವಜ್ಞ ॥ ೨೧

ಊರೆಲ್ಲ ನಂಟರು । ಕೇರಿಯೆಲ್ಲವು ಬಳಗ
ಧಾರಿಣಿಯು ಎಲ್ಲ ಕುಲದೈವವಾಗಿನ್ನು
ಯಾರನ್ನು ಬಿಡಲಿ ಸರ್ವಜ್ಞ ॥ ೨೨

---

# ಟಿಪ್ಪಣಿ

## ೧. ಪಂಪ: 'ಭೀಷ್ಮನ ವೀರಪಟ್ಟ'

" ಕವಿತಾಗುಣಾರ್ಣವ "ನೆಂದೂ " ಸಂಸಾರಸಾರೋದಯ "ನೆಂದೂ ಪ್ರಖ್ಯಾತಿಗೊಂಡ ಪಂಪನು ಕ್ರಿ. ಶ. ೯೦೨ ರಲ್ಲಿ ಜನ್ಮವೆತ್ತಿದನು. ಮೊದಲನೆಯ ತೀರ್ಥಂಕರನಾದ ಆದಿಜಿನನ ವೃತ್ತಾಂತವನ್ನು ವರ್ಣಿಸುವ ಈತನ 'ಆದಿಪುರಾಣ'ವು ಕ್ರಿ. ಶ. ೯೪೧ರಲ್ಲಿ ರಚಿತವಾಯಿತು. ಆ ಬಳಿಕ ಪಂಪನು 'ವಿಕ್ರಮಾರ್ಜುನ ವಿಜಯ'ದಲ್ಲಿ ತನ್ನ ಪ್ರಭುವಾದ ಅರಿಕೇಸರಿಗೂ ಭಾರತ ವೀರನಾದ ಅರ್ಜುನನಿಗೂ ಅಭೇದವನ್ನು ಕಲ್ಪಿಸಿ ಸಮಸ್ತಭಾರತದ ಕಥೆಯನ್ನು ನಿರೂಪಿಸಿದನು. 'ವಿಕ್ರಮಾರ್ಜುನವಿಜಯ'ವು 'ಪಂಪಭಾರತ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಸಂಧಿಯ ಮಾತು ನಿಂತುಹೋದಬಳಿಕ ದುರ್ಯೋಧನನು ಭೀಷ್ಮನಿಗೆ ತನ್ನ ಸೇನೆಯ ವೀರಪಟ್ಟವನ್ನು ಕಟ್ಟದ ಸಂದರ್ಭವೂ ಅದನ್ನು ಕರ್ಣನು ಪ್ರತಿಭಟಿಸಿದಾಗ ನಡೆದ ಬಿರುಸಾದ ವಾಗ್ವಾದವೂ ಭೀಷ್ಮಕರ್ಣಾದಿಗಳ ಸ್ವಾಭಾವಿಕ ಗುಣಗಳು ಎದ್ದುತೋರುವಂತೆ ಇಲ್ಲಿಯ ಕಾವ್ಯಭಾಗದಲ್ಲಿ ಚಿತ್ರಿತವಾಗಿವೆ.

ಪದ್ಯ ೧—೫: ಹರಿಗ–ಪಂಪನ ಪ್ರಭುವಾದ ಅರಿಕೇಸರಿ; ಆತನೊಡನೆ ಅಭೇದಭಾವದಿಂದ ವರ್ಣಿತನಾಗಿರುವ ಅರ್ಜುನ. ಬಿಟ್ಟುದಂ–ಪಾಳೆಯ ಹೂಡಿದ್ದನ್ನು. ಗುರು–ದ್ರೋಣ. ಗುರುಸುತ–ಅಶ್ವತ್ಥಾಮ. ತಱಿಸಲವು–

ನಿಶ್ಚಯ. ಚಲ–ಹಠ. ಕಡಂಗು–ಉತ್ಸಾಹಗೊಳ್ಳು. ಪಡೆವಳ್ಳ–ಸೇನಾಪತಿ. ಒಳ್ಳೆ–ಒಳ್ಳೆಯ ಹಾವು. ಪೇರೊಟ್ಟೆ–ದೊಡ್ಡ ಒಂಟೆ. ಕಳವೇಟ್ದ್ವೆ–ಯುದ್ಧದ ಕ್ಷೇತ್ರವೆಂದು ತಿಳಿಸಿದ್ದೀಯೆ. ದೋರ್ವಳ–ಬಾಹುಬಲ. ಉದಗ್ರ–ಮೇಲ್ಮೊಗವಾದ. ಕತಿಪಯ–ಕೆಲವು. ರಾಜರಾಜ–ಚಕ್ರವರ್ತಿ, ದುರ್ಯೋಧನ. ಸಿಂಧುಜ–ಭೀಷ್ಮ. ಬಟೆಯಟ್ಟು–ದೂತನನ್ನು ಕಳಿಸು.

೬—೧೦ : ಅನುವರ–ಯುದ್ಧ. ಕೋಡಗಗಟ್ಟು–ಒಂದು ಬಗೆಯ ಕಟ್ಟು. ಕೃಷ್ಣನನ್ನು ಮುರನೆಂಬವನು ಪಾಶಗಳಿಂದ ಕಟ್ಟಿಹಾಕಿದಾಗ, ಭೀಷ್ಮನು ಆ ಕಟ್ಟನ್ನು ಬಿಡಿಸಿದನೆಂಬ ಪೂರ್ವಕಥೆ ಇಲ್ಲಿ ಸೂಚಿತವಾಗಿದೆ. ಅಗ್ಗದ–ಶ್ರೇಷ್ಠನಾದ. ಪರಶುಧರ–ಪರಶುರಾಮ. ಅಂಬೆಯನ್ನು ಭೀಷ್ಮನು ಮದುವೆ ಮಾಡಿಕೊಳ್ಳಬೇಕೆಂದು ನಿರ್ಬಂಧಪಡಿಸುವ ಸಲುವಾಗಿ ಪರಶುರಾಮನು ಬಂದು ಭೀಷ್ಮನ ಸಂಗಡ ಕಾದಿ ಸೋತ ಕಥೆ ಇಲ್ಲಿ ಸೂಚಿತವಾಗಿದೆ. ತೊಟ್ಟೆಲೊಳ್ ತೊಟ್ಟು–ಎಳೆತನದಿಂದ ಮೊದಲುಗೊಂಡು. ರಣಾಜಿರ–ರಣರಂಗ. ಆರ್ತನೇ–ಶಕ್ತನಾದನೇ; ಧಾತು ಆಱು. ಕೈಗಟಿವಾಯ್ತು–ಕೈಮೀರಿತು. ಅಣಿಯರಂ–ಅತಿಶಯವಾಗಿ. ಉಱದವರ್–ಹೊಂದದವರು, ಶತ್ರುಗಳು. ಉದಾತ್ತ ನಾರಾಯಣ–ಅರ್ಜುನ.

೧೧—೧೫ : ಪೂಣಿಸು–ಪ್ರತಿಜ್ಞೆಮಾಡಿಸು. ಓರನ್ನರೆ–ಒಂದೇ ಸಮನಾದವರೇ. ಎಕ್ಕೆಯಿಂ–ಒಟ್ಟಾಗಿ. ಓವದೆ–ರಕ್ಷಿಸದೆ. ಮಾರ್ಕೊಳ್–ಪ್ರತಿಭಟಿಸು. ಅಂತಂ ಎಯ್ದೆ–ಕೊನೆಮುಟ್ಟಲು. ಲುಳಿತ–ಹೊರಳಾಡುವ. ಪುದುಂಗೊಳಿಸು–ಒಟ್ಟುಗೂಡಿಸು. ಮಿಸಿಸು–ಸ್ನಾನಮಾಡಿಸು. ಪೊಟ್ಟಳಿಸು–ಗರ್ವಿಸು. ಅವಕರ್ಣಿಸು–ಲಕ್ಷ್ಯವಿಡದೆ ಕೇಳು. ಭಗವತಿಯೇಱು–ಗತಕಾಲದ ಕಥೆಯಾಗಿರುವ ಯುದ್ಧ ( ? ). ಏಱು–ಯುದ್ಧ, ಘಾತ. ಪಗೆವಾಡಿ–ಶತ್ರುಸೈನ್ಯ.

೧೬—೨೦ : ಸರವಿ–ಹಗ್ಗ. ದಂಟು–ದಂಡ, ಕೋಲು. ನಡಪು–ಸಲಹು. ಇಳಿಕೆವಡೆ–ಅಲ್ಪವಾಗು. ಮಾತಂಗ–ಆನೆ. ತುಬ್ಬು–ಸೂಚಿಸು. ಕಿನಿಸು–ಕೋಪಿಸು. ಅಣ್ಮು–ಶೌರ್ಯ.

೨೧—೨೫ : ತಳ್ತು ಇಱಿ–ಮೇಲೆಬಿದ್ದು ಘಾತಿಸು. ಕಲಿತನ–ಪೌರುಷ. ಪ್ರೊಡರ್ಪು–ಉತ್ಸಾಹ. ಮೊಕ್ಕಳಂ–ಅಧಿಕವಾಗಿ. ಪಳಂಚು–ಸಂಘಟ್ಟಿಸು. ಸೂೞ್–ಸರದಿ. ಕರಮೆ–ಹೆಚ್ಚಾಗಿಯೆ. ಚಕ್ರಿ–ಕೃಷ್ಣ. ಪಡಲಿಡು–ಚೆದರಿಬೀಳು. ಪಯಿಂಛಾಸಿರ್ವರ್–ಹತ್ತುಸಾವಿರ ಮಂದಿ. ಕೆಡೆ–ಬೀಳು. ಅಳುರ್ಕೆ–ವ್ಯಾಪನೆ. ಮರುಳ್ದು–ಭ್ರಮೆಗೊಂಡು.

## ೨. ರನ್ನ : 'ನೀರೊಳಗಿರ್ದುಂ ಬೆಮರ್ತನುರಗಪತಾಕಂ'

ಕನ್ನಡದ ರತ್ನತ್ರಯದಲ್ಲಿ ಒಬ್ಬನಾದ ರನ್ನನು ಮುದುವೊಳಲಲ್ಲಿ ಕ್ರಿ.ಶ.೯೪೯ರಲ್ಲಿ ಹುಟ್ಟಿದನು. ಈತನು 'ಅಜಿತಪುರಾಣ'ವೆಂಬ ಜೈನಪುರಾಣವನ್ನೂ 'ಸಾಹಸಭೀಮವಿಜಯ' ಅಥವಾ 'ಗದಾಯುದ್ಧ'ವೆಂಬ ಲೌಕಿಕ ಕಥೆಯನ್ನೂ ಬರೆದಿರುವುದಲ್ಲದೆ, 'ಪರಶುರಾಮಚರಿತ', 'ಚಕ್ರೇಶ್ವರಚರಿತ' ಎಂಬ ಕೃತಿಗಳನ್ನೂ ರಚಿಸಿದ್ದಂತೆ ಗೊತ್ತಾಗುತ್ತದೆ. ಈತನು ವೈಯಾಕರಣನೂ ಆಗಿದ್ದನಂತೆ. 'ಸಾಹಸಭೀಮವಿಜಯ'ದಲ್ಲಿ ಕವಿ ತನ್ನ ಆಶ್ರಯದಾತನಾದ ಸತ್ಯಾಶ್ರಯ ಇಱಿವಬೆಡಂಗನನ್ನು ಭೀಮನಿಗೆ ಹೋಲಿಸಿ ರಚನೆ ಮಾಡಿದ್ದಾನೆ. ರನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದಿತ್ತು.

ತನ್ನ ತನುಜಾನುಜರೆಲ್ಲರೂ ಭಾರತಯುದ್ಧದಲ್ಲಿ ಮಡಿದಮೇಲೆ, ಬಲರಾಮನು ತೀರ್ಥಯಾತ್ರೆಯಿಂದ ತಿರುಗಿಬರುವವರೆಗಾದರೂ ವೈಶಂಪಾಯನ ಸರೋವರದಲ್ಲಿ ತಲೆಮರಸಿಕೊಂಡಿರಬೇಕೆಂದು ಭೀಷ್ಮನು ತನಗೆ ಉಪದೇಶಿಸಿದ ಮೇರೆಗೆ ಸಾಹಸಧನ ದುರ್ಯೋಧನನು ಕೊಳದಲ್ಲಿ ಅಡಗಿದ್ದಾಗ ಆ ವಿಷಯವನ್ನು ದೂತನಿಂದ ತಿಳಿದು, ದುರ್ಯೋಧನನನ್ನು ಅಲ್ಲಿಂದ ಹೊರಡಿಸಲು ಪಾಂಡವರು ಮಾಡಿದ ಪ್ರಯತ್ನವೂ ದುರ್ಯೋಧನಭೀಮರ ವೀರಾಲಾಪಗಳೂ ಇಲ್ಲಿಯ ಕಾವ್ಯಭಾಗದಲ್ಲಿ ರಸನಿರ್ಭರವಾದ ನಾಟಕೀಯ ಶೈಲಿಯಲ್ಲಿ ನಿರೂಪಿತವಾಗಿವೆ.

ಪದ್ಯ ೧—೫: ದ್ಯುನದೀಜ–ದೇವನದಿಯ ಮಗ, ಭೀಷ್ಮ. ಕೆಯ್ಗೆ ಮಾಳ್ಪುದು–ವಶಪಡಿಸಿಕೊಳ್ಳಬೇಕು. ಪಱಿವಡಿಪುದು–ಭೇದಿಸತಕ್ಕದ್ದು. ಅರವಿಂದನಾಭ–ಶ್ರೀಕೃಷ್ಣ. ಹಲ–ನೇಗಿಲು. ಪರಿಭಾಷೆ–ಅಪವಾದ. ಪಿರುವತ್–ಕೂಗುತ್ತಿರುವ. ಸಾರಸ-ಒಂದು ಬಗೆಯ ನೀರುಹಕ್ಕಿ. ಏವಂದಿರ್-ಏನುಕಾರಣ ಬಂದಿರಿ. ಉದ್ಘೂತ–ಮೇಲೆ ತೂರಲ್ಪಟ್ಟ. ಉತ್ತರಂಗಾಂಬು–ಎತ್ತರವಾದ ಅಲೆಯ ನೀರು. ವಿಕಚತ್ಪಂಕೇಜ–ಅರಳುತ್ತಿರುವ ಕಮಲ. ಕಿಸಲಯ–ಚಿಗುರು. ಮಿಳಿಮಿಳಿರ್–ಅಲುಗಾಡು. ಅಹಿತ–ವೈರಿ.

೬—೧೦: ಪಿಂಗಾಕ್ಷ-ದುರ್ಯೋಧನ. ತಲೆಗರೆ–ಮರೆಯಾಗು. ಪಗೆವಂ-ಶತ್ರು. ತವೆ–ಏನೂ ಉಳಿಯದ ಹಾಗೆ. ಮತ್ಪತಿಗೆ–ನನ್ನ ಪ್ರಭುವಾದ ಯುಧಿಷ್ಠಿರನಿಗೆ. ಬಾಹಾಸ್ಫಾಲನಂಗೈದು–ಭುಜವನ್ನು ತಟ್ಟಿಕೊಂಡು. ಪಱೆ–ವಾದ್ಯವಿಶೇಷ. ಪಂಚಮಹಾವಾದ್ಯಂಗಳ್–ಕೊಂಬು, ತಂಬಟೆ, ಶಂಖ, ಭೇರಿ, ಜಾಗಟೆ. ಆಸ್ಫೋಟಿಸಿ–ಸಿಡಿದು. ಅಂಕದ ಕಲಿ–ಹೆಸರಾದ ಶೂರ. ಶಶಾಂಕ–ಚಂದ್ರ. ಎಕ್ಕತುಳ–ದ್ವಂದ್ವಯುದ್ಧ.

೧೧—೧೫: ಉತ್ಕಟಿಸಿ–ಉದ್ರೇಕಗೊಂಡು. ಸುಭಟರ ಜವ–ವೀರರಿಗೆ ಯಮನಂತಿರುವ ಭೀಮಸೇನ. ಸಿತಾಶ್ವ–ಅರ್ಜುನ. ಅಣ್ಮುವೊಡೆ–ಸಾಮರ್ಥ್ಯ ತೋರಿಸುವಲ್ಲಿ. ಬಾಳ ಸವಿ-ಖಡ್ಗದ ಸವಿ. ಕುಮರಂಕರಾಮ-ಕಾವ್ಯನಾಯಕನಾದ ಸತ್ಯಾಶ್ರಯನ ಬಿರುದುಗಳಲ್ಲಿ ಒಂದು. ಅರಿದು–ಅಸಾಧ್ಯ.

೧೬—೨೦: ಅನ್ವಾಯ-ವಂಶ. ಸಾಪತ್ನ್ಯ-ಶತ್ರುತ್ವ. ಬೂತು–ಭೂತ. ಬದ್ಧಭ್ರುಕುಟಿ–ಬಿಗಿದ ಹುಬ್ಬುಗಂಟಿನವ. ವಿಗ್ರಹ–ಯುದ್ಧ. ಉಳಿ–ಅಡಗು. ಅರುಣಜಲ–ರಕ್ತ. ಕೋಡ ಸೇಡು–ಚಳಿಯ ಸೆಡೆತ. ಉದ್ಭೀಕರ–ಭಯಂಕರನಾಗಿರುವವ.

೨೧—೨೫: ಅವಗಡಿಸು–ಮೇಲೆ ಬೀಳು. ಆಕೃಷ್ಟಿ–ಸೆಳೆಯುವುದು. ವಾರಿ–ಕತ್ತಿ (?). ಕೆಡೆ–ಬೀಳು. ಪಿಳಿ–ಬಿರಿ. ಒಡರಿಸುವಿನಂ–ತೊಡಗಲು. ಅನಾಕುಳಂ–ಆತಂಕವಿಲ್ಲದೆ.

೨೬—೩೦ : ಉರವಣಿಸಿ-ತೀವ್ರತೆಯಿಂದ ಕೂಡಿ. ನಿಕಾಯ-ಸಮೂಹ. ಪಯಶ್ಚರನಿಕರ-ನೀರಲ್ಲಿ ಚಲಿಸುತ್ತಿರುವ (ಪಕ್ಷಿಗಳ) ಸಮೂಹ. ಉಲ್ಲ ಹರಿಕೆ-ಮೇಲಕ್ಕೇರುವ ಅಲೆ. ಅಸುಂಗೊಳ್-ಶಕ್ತಿಗುಂದು (?). ಗೋಟುಂಡೆ ಗೊಳ್-ತುಂಬ ಗೋಳಿಡು. ಸಿಂಹಕೇತನ-ಭೀಮಸೇನ. ಕಂಠೀರವ-ಸಿಂಹ. ಘನರವ-ಮೇಘಧ್ವನಿ, ಗುಡುಗು.

೩೧—೩೫ : ಕೂರದರ್-ವೈರಿಗಳು, ಆಗದವರು. ಇಂಬೞಿಯಂ-ಬಳಿಕ. ಅಖಲ್ಯಂ-ಹೇಡಿ (?). ಇಲ್ಲಿಯ ಮೂಲಪಾಠ "ಅ[ಶ]ಲ್ಯಂ.... [ಶ]ಲ್ಯನೆನೆ" ಎಂದು ಇದ್ದಿರಬಹುದೆ? ಅಶಲ್ಯ-ಶಸ್ತ್ರರಹಿತನಾದವನು. ಶಲ್ಯ-ಒಂದು ಬಗೆಯ ಮೀನು. ಬಾರ್ತೆಗೆಟ್ಟುದು-ಅಪ್ರಯೋಜಕವಾಯಿತು. ಚಾಗ-ತ್ಯಾಗ. ಮುನಿವಂ-ಶತ್ರು. ವಿಬುಧಕ್ಷೋಭ-ದೇವತೆಗಳ ತಳಮಳ. ಕಱಿಂಗಿ-ಕಪ್ಪಾಗಿ. ಪರಿಘ-ಅಗುಳಿ. ಉತ್ತಮಾಂಗ-ಶಿರಸ್ಸು.

೩೬—೪೦ : ರಸೆ-ಭೂಮಿ. ಅದ್ಭುತನಟ-ಪರಶಿವ. ನಿಟಲ-ಹಣೆ. ಆಲೋಲಕೀಲಾಕ್ಷಿವೊಲ್-ಹೊರಳಿ ತಿರುಗುತ್ತಿರುವ ಉರಿಗಣ್ಣಿನಂತೆ. ದಂದಶೂಕಪತಾಕ-ಸರ್ಪಧ್ವಜವುಳ್ಳವನು, ದುರ್ಯೋಧನ. ಸೆರಗಿಲ್ಲದ-ಸಹಾಯವನ್ನು ಬೇಡದ. ನೆಱಿನಂ ಉಂಟುಮಾಡಿ-ಮರ್ಮೋದ್ಘಾಟನೆ ಮಾಡಿ. ಕಚ-ಕೂದಲು. ಅಸುರ-ಹಿರಣ್ಯಾಕ್ಷನೆಂಬ ರಾಕ್ಷಸ.

೪೧—೪೬ : ನಾಟ್ಕಡೆ-ದೇಶದ ಎಲ್ಲೆ. ಬಿಟ್ಕಿ-ಒಂದು ಬಗೆಯ ಹಣ್ಣು. ನೀಟ್ಕರಿಸಿ-ಉದ್ದವಾಗಿ. ಕಮ್ಮೈಸು-ವಿಸ್ತರಿಸು (?). ಪುಟ್ಟು-ಸೌಟು. ಅಕ್ಕಿಗರ್ಚು-ಅಕ್ಕಿಯನ್ನು ತೊಳೆ. ನನ್ನಿ-ಸತ್ಯ. ಬನ್ನ-ಭಂಗ. ಜತುಗೇಹ-ಅರಗಿನ ಮನೆ.

## ೩. ಜನ್ನ : 'ಅಮೃತಮತಿ-ಅಷ್ಟಾವಂಕ'

ಜನ್ನನು ಹೊಯ್ಸಳ ವೀರಬಲ್ಲಾಳನ ಆಶ್ರಯದಲ್ಲಿಯೂ ಅವನ ಮಗ ನರಸಿಂಹನ ಆಸ್ಥಾನದಲ್ಲಿಯೂ ಇದ್ದು ಪ್ರಖ್ಯಾತಿ ಪಡೆದನು. ಇವನಿಗೆ ಕವಿಚಕ್ರವರ್ತಿ ಎಂಬ ಬಿರುದು ದೊರೆತಿತ್ತು. ಈತನು ಯಶೋಧರಚರಿತೆಯನ್ನು ಕ್ರಿ. ಶ. ೧೨೦೯ರಲ್ಲಿಯೂ ಅನಂತನಾಥಪುರಾಣವನ್ನು ಕ್ರಿ. ಶ. ೧೨೩೦ರಲ್ಲಿಯೂ

ರಚಿಸಿದನು. 'ಅನುಭವಮುಕುರ' ಎಂಬ ಲಘುಕೃತಿಯನ್ನೂ ಈತನು ಬರೆದಿರುವಂತೆ ತೋರುತ್ತದೆ. ಅಲ್ಲದೆ, ಕ್ರಿ. ಶ. ೧೧೯೧ ಹಾಗೂ ಕ್ರಿ. ಶ. ೧೧೯೭ರಲ್ಲಿ ಅನುಕ್ರಮವಾಗಿ ಹುಟ್ಟಿದ ಚೆನ್ನರಾಯಪಟ್ಟಣದ ಮತ್ತು ತರೀಕೆರೆಯ ಶಾಸನಗಳೂ ಈ ಕವಿಯ ರಚನೆಗಳು.

ಯಶೋಧರಚರಿತೆ ಜೈನಧರ್ಮದ ಅಹಿಂಸೆ ಹಾಗೂ ಜನ್ಮಾಂತರತತ್ವಗಳನ್ನು ವಿವರಿಸುವ ಕಾವ್ಯ. ಯಶೋಧರಮಹಾರಾಜನು ತನ್ನ ಪತ್ನಿಯ ದುರ್ವರ್ತನೆಯಿಂದ ಬೇಸರಗೊಂಡು ಅದರ ವಿಚಾರವನ್ನು ತನ್ನ ತಾಯಿಗೆ ದುಸ್ಸ್ವಪ್ನದ ನೆವದಲ್ಲಿ ತಿಳಿಸಿದಾಗ ಆವಳು ಶಾಂತಿಗಾಗಿ ದೇವಿಗೆ ಬಲಿಕೊಡಬೇಕೆಂದು ಹಠತೊಡುತ್ತಾಳೆ. ಅವಳ ನಿರ್ಬಂಧಕ್ಕೆ ಕಟ್ಟುಬಿದ್ದು ಯಶೋಧರನು ಮಾಡಿದ ಸಂಕಲ್ಪಹಿಂಸೆ ಹೇಗೆ ತಾಯಿಮಕ್ಕಳಿಬ್ಬರನ್ನೂ ಏಳೇಳು ಜನ್ಮಗಳಲ್ಲಿ ಸುತ್ತಿಸಿತೆಂಬುದರ ಕಥೆ ಈ ಗ್ರಂಥದಲ್ಲಿ ನಿರೂಪಿತವಾಗಿದೆ.

ಯಶೋಧರನ ಪತ್ನಿಯಾದ ಅಮೃತಮತಿ ಅಷ್ಟಾವಂಕನೆಂಬ ಮಾವುತನ ಇನಿದನಿಗೆ ಮೋಹಗೊಂಡು ತನ್ನ ಪತಿಯ ಪ್ರೇಮಕ್ಕೆ ದ್ರೋಹಬಗೆದು ಹೇಗೆ ಆ ಕುರೂಪಿಯನ್ನು ಕೂಡಿದಳು, ಅದನ್ನು ಅರಿತ ಯಶೋಧರನ ಮನಸ್ಸಿನ ಮೇಲೆ ಎಂಥ ಪರಿಣಾಮವಾಯಿತು ಎಂಬ ಸಂಗತಿಯನ್ನು ಜನ್ನನು ಇಲ್ಲಿ ಕೊಟ್ಟಿರುವ ಕಾವ್ಯಭಾಗದಲ್ಲಿ ಉಜ್ವಲವಾಗಿ ಚಿತ್ರಿಸಿದ್ದಾನೆ.

ಪದ್ಯ ೧—೫: ಕುಟ್ಮಳ—ಮೊಗ್ಗೆ. ನನೆ—ಮೊಗ್ಗೆ. ನಾರಿ—ಹೆದೆ.

೬—೧೦: ದೀವ-ಬೇಟೆಹಿಡಿಯುವುದಕ್ಕಾಗಿ ಬಿಡುವ ಪ್ರಾಣಿ. ಪುಳಿಂದ—ಬೇಡ. ಗೋರಿಗೊಳಿಸು—ಮೋಸದಿಂದ ಸೆಳೆ. ಹೊಱಸು—ಪಾರಿವಾಳ.

೧೧—೧೫: ಅಂಬರತರಂಗಿಣಿ—ದೇವಗಂಗೆ. ಪುಳಿನ—ಉಸುಕಿನ ದಿಬ್ಬ. ದವಳಾರ—ಧವಳಾಗಾರ, ಸೌಧ. ಅಭ್ರಮು-ಐರಾವತದ ಹೆಂಡತಿ. ಅಭ್ರಗಜ-ಐರಾವತ. ಸೆಜ್ಜರ—ಶಯ್ಯಾಗಾರ. ಗರಟಿಗೆ—ಗಸ್ತಿ. ಉಕ್ಕಡ—ಊರ ಅಗಸೆ. ಬದಗ—ಕೀಳುಆಳು. ಕತಕಬೀಜ—ಕದಡಿದ ನೀರನ್ನು ತಿಳಿಮಾಡುವ ಒಂದು ಬೀಜ. ಪಸಾಯದಾನ—ಮೆಚ್ಚಿ ಕೊಟ್ಟ ದಾನ.

೧೬—೨೦: ಗರಗರಿಕೆ–ಸೊಗಸು. ಕಾದಲ–ಪ್ರಿಯ. ದೂದವಿ–ದೂತಿ.

೨೧—೨೫: ಕುಟಿ–ಕುಣಿ, ತಗ್ಗು. ಅಟಿಗಣ್–ವಿಕಾರವಾದ ಕಣ್ಣು. ಒಱೆವಾಯ್–ಜೊಲ್ಲುಸೋರುವ ಬಾಯಿ. ಹಪ್ಪಳಿಕೆಮೂಗು–ಚಪ್ಪಟೆಯಾದ ಮೂಗು. ಬಿಬ್ಬಿಱುವಲ್–ಉಬ್ಬಿದ ಹಲ್ಲು. ಕುಱುಗಣ್ಣು–ಸಣ್ಣ ಕಣ್ಣು. ಕೂನಬೆನ್-ಬಾಗಿದ ಬೆನ್ನು. ಗರಗರಿಕೆ-ಗಗ್ಗರದನಿ. ವಾರ್‌ಬಿಂದು–ನೀರ ಹನಿ. ಪೊಲ್ಲಮೆ–ದೋಷ, ಹೊಲಸು.

೨೬—೩೦: ಎರವಿಗೊಳ್–ಬೇಡು. ಇಳಿದಪ್ಪಂತೆ–ಹೀನವಾಗುವಹಾಗೆ. ಪಱಮೆ–ಭ್ರಮರ. ಕೈರವ–ನೈದಿಲೆ. ಪ್ರಚ್ಛನ್ನ–ಮರೆ.

೩೧—೩೫: ಮಿಳಿ–ಮಿಣಿ, ಬಾರು. ಕುಡಿಯ–ಒಕ್ಕಲಿಗ. ತದೆ–ಸದೆ, ಬಡಿ. ಬೀಟೆ–ಬಿರುಕು. ಕೇರೆ–ಕೇರೆ ಹಾವು.

೩೬–೪೩: ಕೇಳಿಕೆ–ನಾಟಕಾದಿ ದೃಶ್ಯ. ಪುಲುಕರು–ಹುಳುಕರು, ನೀಚರು. ಇಱುಂಪೆ–ಇರುವೆ. ಕಯ್ಪೆಸೊರೆ–ಕಹಿಕುಂಬಳಕಾಯಿ. ಕಿಸುಗುಳ–ಹೇಯ, ಕ್ಷುದ್ರ. ಪೆಱಗು–ಹಿಂದೆ. ಕಟಿಪು–ದೋಷ. ದಂದುಗ–ತೊಂದರೆ, ಕಾಟ. ಆತೋದ್ಯ–ವಾದ್ಯ.

## ೪. ಚಾಮರಸ: 'ಮಾಯಾಕೋಲಾಹಲ'

ಹದಿನೈದನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣರಾದ ನೂರೊಂದುಜನ ವಿರಕ್ತರಲ್ಲಿ ಚಾಮರಸನು ಪ್ರಮುಖನಾಗಿದ್ದನು. ಈತನು ಪ್ರಭುಲಿಂಗಲೀಲೆಯನ್ನು ರಚಿಸಿ ವಿಜಯನಗರದ ಪ್ರೌಢದೇವರಾಯ (ಕ್ರಿ. ಶ. ೧೪೪೯–೧೪೪೬) ನಿಂದ ಮನ್ನಣೆವಡೆದನೆಂದು ತಿಳಿಯಬರುತ್ತದೆ.

ಪಾರ್ವತಿಯು ಪರಶಿವನ ಸಾಕ್ಷಾತ್‌ಸ್ವರೂಪನಾದ ಅಲ್ಲಮನನ್ನು ತನ್ನ ತಮೋಗುಣದಿಂದ ಗೆಲ್ಲುವೆನೆಂದು ಪ್ರತಿಜ್ಞೆಮಾಡಿ ಮಾಯೆಯನ್ನು ಭೂಲೋಕಕ್ಕೆ ಕಳುಹುವಳು. ಬನವಸೆಯ ಮಧುಕೇಶ್ವರಮಂದಿರದಲ್ಲಿ

ಅಲ್ಲಮನು ಮದ್ದಳಿಗನಾಗಿ ವ್ಯೈದೋರಲು ಮಾಯಾದೇವಿಯು ಆತನನ್ನು ಕಂಡು ಮೋಹಗೊಂಡು, ತನ್ನ ಅಭಿಲಾಷೆ ಸಲ್ಲದೆ, ಕೊನೆಗೆ ಕಾಲ್ನಡಿಗೆಯಿಂದ ಆತನ ಬೆನ್ನು ಹತ್ತುವಳು. ಅಲ್ಲಮನು ಮಾಯಾದೇವಿಯ ಸಕಾಮ ಪ್ರೇಮಕ್ಕೆ ಮೆಚ್ಚದೆ ನಿರ್ವಯಲಿಗನಾಗಿ ಹೋಗುವನು. ಅಲ್ಲಮನನ್ನು ಕೂಡಬೇಕೆಂದು ಹಾತೊರೆಯುವ ಮಾಯೆಯ ಮನದ ಕಾತರತೆಯನ್ನೂ ನಿಜದ ನಿಲವಿನಲ್ಲಿ ನಿಂದ ಪ್ರಭುವಿನ ಮನದ ಮಾಟವನ್ನೂ ಚಾಮರಸನು ಬಹಳ ಚೆನ್ನಾಗಿ ಚಿತ್ರಿಸಿರುವನು. ಇಲ್ಲಿಯ ಸಂಭಾಷಣೆಗಳು ಅತ್ಯಂತ ಹೃದಯಂಗಮವಾಗಿರುವುದನ್ನು ಕಾಣಬಹುದು.

ಪದ್ಯ ೧—೫ : ಹಣ್ಣಿದ-ರಚಿಸಿದ. ಅರಿದು-ಅಸಾಧ್ಯ. ತಳಿತ-ಸೇರಿದ. ಹೂಣಿಸಿದ-ಪಂಥತೊಟ್ಟ. ಹೀಹಾಳಿ-ತಿರಸ್ಕಾರ. ಚಾಳಿ-ಗತಿಲಾಘವ.

೬—೧೦ : ವಿಮಳೆ-ಮಾಯೆಯನ್ನು ಎಚ್ಚರಿಸುವ ಸಲುವಾಗಿ ಪಾರ್ವತಿಯ ಕಡೆಯಿಂದ ಬಂದಾಕೆ. ಅನಿಮಿಷತೆ-ಎವೆಯಿಕ್ಕದಿರುವುದು. ಜೋಹ-ವೇಷ. ಗಾಹು-ಕಪಟತನ. ಅಳುಪು-ಮೋಹದ ಆಸೆ.

೧೧—೧೫ : ಪೈಜೆ-ಪಂಥ. ಅಳಬಳ-ಶಕ್ತಿ. ಸರಿಸ-ಸಮೀಪ. ಮಕರಿಸು-ಹೆಚ್ಚಾಗು. ಕಾಕರು-ಅಲ್ಪರು. ನಟ್ಟುವಿಗ-ನಾಟ್ಯಶಿಕ್ಷಕ.

೧೬—೨೦ : ಬಾರಿ-ಸರದಿ. ತರಹರಗೊಳ್ಳು-ಸಮಾಧಾನಗೊಳ್ಳು. ಧೂಪಿಸು-ದಣಿ, ಸಂಕಟಪಡು.

೨೧—೨೫ : ಕಡವಸ-ಕೃಷ್ಣಾಜಿನ. ಗೂಡುಸಂವರಿಸು-ಎಲ್ಲವನ್ನೂ ಒಟ್ಟುಗೂಡಿಸು. ಲಾಕುಳ-ಯೋಗದಂಡ. ಬೋಳೆಯರು-ದೇವತೆಗಳು. ಪಸು-ಹಸಿವು.

೨೬—೩೦ : ಉದಾಸಿಸು-ಉದಾಸೀನಮಾಡು. ಬೇಳುವೆ-ಯಜ್ಞದ ಬಲಿ. ಆಳವಾಡು-ತಗ್ಗಿಸಿ ಮಾತಾಡು. ಕೀಳಿಲಲಿ-ಕೆಳಮನೆಯಲ್ಲಿ. ಚಾಟು-ಪ್ರಿಯವಾದ ಸ್ತುತಿ. ಕುಚ್ಛಿತ-ಕುತ್ಸಿತ. ಅಟಮಟಿಗತನ-ವಂಚನೆ.

೩೧—೩೫ : ಹರಿಸುಟಿಗೆಯಾಡು–ಸುತ್ತಾಡಿಸು (?). ಲೋಚು–ತಲೆಯ ಕೂದಲು ಕೀಳಿಸುವುದು.

೩೬—೪೦: ಜೋಡಾಡು–ಪರಿಹಾಸಮಾಡು. ವಾಸಿ–ಪಂಥ. ಬಱುದೆಗೆ–ಇಲ್ಲಿಯ ರೂಪವು ಬಱಿದೆಗೆ (=ವ್ಯರ್ಥವಾಗಿ) ಎಂದಿರಬಹುದೆ ? ಕೀಸು–ಕೊರೆ. ಕಂಬಿ–ಕಬ್ಬಿಣದ ಶಲಾಕೆ. ಹಱಿವು–ವಿಚ್ಛೇದ.

೪೧—೪೫ : ಹಮ್ಮವಿಸು–ಮೂರ್ಛೆಹೊಂದು.

೪೬—೫೦ : ಹೂಣಿಕೆ–ಪ್ರತಿಜ್ಞೆ. ಪರುಷ–ಸ್ಪರ್ಶಮಣಿ. ಊಣೆಯ–ಕುಂದು.

೫೧—೫೯ : ತತ್ತಡೆ–ಸಂಭವಿಸಿದರೆ. ಮನಕತ–ಮನಸ್ಸಿನ ನೋವು. ಗಸಣೆ–ತಿಕ್ಕಾಟ. ಗಾಱುದೂಱು–ಬಿರುಸಾದ ದೂರು.

## ೫. ನಂಜುಂಡ : 'ಕುಮಾರರಾಮ ಶೌರ್ಯದರ್ಶನ'

ಕುಮಾರರಾಮನ ಸಾಂಗತ್ಯವನ್ನು ಬರೆದ ನಂಜುಂಡಕವಿಯ ಕಾಲ ಕ್ರಿ. ಶ. ಸುಮಾರು ೧೫೨೫ ಆಗಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ. ಕನ್ನಡದಲ್ಲಿ ವಿರಳವಾಗಿರುವ ಐತಿಹಾಸಿಕ ಕಾವ್ಯಗಳಲ್ಲಿ ಕುಮಾರರಾಮನ ಸಾಂಗತ್ಯಕ್ಕೆ ಒಂದು ಮುಖ್ಯ ಸ್ಥಾನವುಂಟು. ವಿಜಯನಗರ ರಾಜ್ಯಸ್ಥಾಪನೆಗೆ ಸ್ವಲ್ಪ ಮುಂಚೆ ಕನ್ನಡನಾಡಿನ ರಾಜಕೀಯ ಸಾಮಾಜಿಕ ಸ್ಥಿತಿಗಳು ಹೇಗಿದ್ದು ವೆಂಬುದನ್ನು ಈ ಕೃತಿಯಿಂದ ಕೆಲವು ಮಟ್ಟಿಗೆ ಗ್ರಹಿಸಬಹುದು.

ಕುಮಾರರಾಮನ ಸಾಂಗತ್ಯ ಇನ್ನೂ ಮುದ್ರಿತವಾಗಿಲ್ಲದ ಕಾರಣ, ಅದರ ಕಥಾಂಶವನ್ನು ಸ್ವಲ್ಪಮಟ್ಟಿಗೆ ತಿಳಿಸುವುದು ಅವಶ್ಯ. ಕುಮ್ಮಟ ದುರ್ಗದ ಅಧಿಪತಿಯಾದ ಕಂಪಿಲರಾಯನು ತನ್ನ ಕಿರಿಯ ಹೆಂಡತಿ ರತ್ನಾಜಿಯ ಮಾತನ್ನು ನಂಬಿ ಹಿರಿಯ ಮಗನಾದ ಕುಮಾರರಾಮನ ಪ್ರಾಣಕ್ಕೆ ಮುನಿದು ಅವನನ್ನು ಕೊಲ್ಲಿಸುವಂತೆ ಮಂತ್ರಿಯಾದ ಬೈಚಪ್ಪನಿಗೆ

ಅಪ್ಪಣೆಮಾಡಿದನು. ಆದರೆ ಬೈಚಪ್ಪನು ದೊರೆಯ ಆಜ್ಞೆಯನ್ನು ನಡಸದೆ ನೆಲಮಾಳಿಗೆಯಲ್ಲಿ ಕುಮಾರರಾಮನನ್ನು ಸುರಕ್ಷಿತವಾಗಿ ಬಚ್ಚಿಟ್ಟು ಅವನ ವಧೆ ನಡೆಯಿತೆಂದು ಸುಳ್ಳುಸುದ್ದಿಯನ್ನು ಹಬ್ಬಿಸಿದನು. ಇದು ದಿಳ್ಳಿಯ ಸುಲ್ತಾನನಾದ ಅಲ್ಲಾಉದ್ದೀನನಿಗೂ ತಿಳಿದು ಕರ್ಣಾಟರಾಜ್ಯವನ್ನು ಗೆಲ್ಲುವುದಕ್ಕೆ ಇದೇ ಸಕಾಲವೆಂದು ಅವನು ಭಾವಿಸಿ ತನ್ನ ದಳಪತಿಯಾದ ನೇಮಿಖಾನನನ್ನು ದೊಡ್ಡ ಸೈನ್ಯದೊಡನೆ ಕಳಿಸಿಕೊಟ್ಟನು. ನೇಮಿಮಲ್ಲುಕನು ಕುಮ್ಮಟದುರ್ಗದ ಬಳಿ ತನ್ನ ಸೈನ್ಯವನ್ನು ನೆಲೆಗೊಳಿಸಿ ಯುದ್ಧಕ್ಕೆ ಸಿದ್ಧನಾದನು. ಈ ಸೈನ್ಯವನ್ನು ಸೋಲಿಸುವುದು ಹೇಗೆಂದು ಕಂಪಿಲರಾಯನು ಚಿಂತೆಮಾಡುತ್ತಿರುವಾಗ ಮಂತ್ರಿ ಬೈಚಪ್ಪನು ಬಂದು ಅವನಿಗೆ ಧೈರ್ಯ ಹೇಳಿ ಕುಮಾರರಾಮನನ್ನು ನೆಲಮಾಳಿಗೆಯಿಂದ ಬಿಟ್ಟು ಯುದ್ಧಕ್ಕೆ ಕಳಿಸಿದನು. ರಾಮನಾಥನು ನೇಮಿಯ ಸೈನ್ಯದ ಕೂಡ ಅಸಮಸಾಹಸದಿಂದ ಹೋರಾಡಿ ಅದನ್ನು ಸೋಲಿಸಿ ಹಿಮ್ಮೆಟ್ಟಿಸಿದ ವೃತ್ತಾಂತವೂ ಬಳಿಕ ಅವನು ತನ್ನ ತಂದೆತಾಯಿಗಳಿಗೆ ಕಾಣಿಸಿಕೊಂಡ ಆನಂದವಿಸ್ಮಯದ ಪ್ರಸಂಗವೂ ಇಲ್ಲಿಯ ಕಾವ್ಯಭಾಗದಲ್ಲಿ ಮನೋಹರವಾಗಿ ಚಿತ್ರಿತವಾಗಿವೆ.

ಪದ್ಯ ೧—೫: ಕೆತ್ತವು–ಮುಚ್ಚಿದುವು.

೬—೧೦: ಗನ್ನ–ಮೋಸ. ಮನ್ನೆಯ–ಪ್ರಭು, ದಳಪತಿ. ಉಚಿವ–ಯೋಗ್ಯರಾದ.

೧೧—೧೫: ಪಕ್ಕರಿಕೆ–ಜೀನು, ಸಂ. ಪಕ್ಷರಕ್ಷೆ. ಜೋಡು–ಮೈಜೋಡು, ಕವಚ. ಶೌಳಿ–ಶಿರಸ್ತ್ರಾಣ. ಪಟ್ಟೆಗಾವಿನ–ಪಟ್ಟೆಯ ಹಿಡಿಯನ್ನುಳ್ಳ. ಸತ್ತಿಗೆ–ಛತ್ರ.

೧೬—೨೦: ಸಿಂಗಾಡಿ ಬಿಲ್ಲು–ಕೊಂಬಿನಿಂದ ಮಾಡಿದ ಬಿಲ್ಲು. ಸುಗಿ–ಹೆದರು. ಬಲವೈರಿಸುತ–ಇಂದ್ರಸುತ, ಅರ್ಜುನ. ಮೋಹರಿಸು–ಒಡ್ಡಿನಿಲ್ಲು. ಸಂಶಪ್ತಕರು–ಶತ್ರುಗಳನ್ನು ಬಿಡದೆ ಕಾದುವೆವೆಂದು ಪ್ರತಿಜ್ಞೆತೊಟ್ಟ ವೀರರು. ಸೂಳೈಸು–ಶಬ್ದಮಾಡು. ಲಗ್ಗೆವಱೆ–ಜೊತೆಗೂಡಿದ ತಂಬಟೆಗಳು. ವೃಜಿನ–ಪಾಪ.

೨೧—೨೫ : ಹೊರಳಿಯೊಡೆ–ಗುಂಪು ಕೆಡು. ಒಕ್ಕಲಿಕ್ಕು–ಧ್ವಂಸ ಮಾಡು ಪಂದಲೆ–ಕತ್ತರಿಸಿ ರಕ್ತಸೋರುವ ತಲೆ. ಬಡಿ–ದೊಣ್ಣೆ.

೨೬—೩೦ : ಕೆಡೆ–ಬೀಳು.

೪೧—೪೫: ಹರಪದವಿ-ಕೈಲಾಸಸ್ಥಾನ. ಹರಿಪದ-ವೈಕುಂಠ. ಹರಿಹರದೇವಿ–ಕುಮಾರರಾಮನ ತಾಯಿಯ ಹೆಸರು ಅಗಜಾಪತಿ–ಪಾರ್ವತೀಪತಿ, ಶಿವ. ವಿಲಕ್ಷನಾಗು–ಬೇರಗಾಗು. ತಳತಂತ್ರ–ಸೈನ್ಯ.

೪೬—೫೦ : ಒತ್ತಂಬರಿಸು–ತೀವ್ರವಾಗಿ ಒತ್ತು. ಕುಪಕ–ಕೂಪಕ, ಓಕುಳಿನೀರನ್ನು ತುಂಬಿರುವ ಪಾತ್ರೆ (?).

೫೧—೬೦ : ಹೀರಾವಳಿ–ವಜ್ರದ ಸರ. ನೆಲನನುಗ್ಘಡಿಸು–ಪಾದಾವಧಾನ ಹೇಳು ಕಟ್ಟಗೆಕಾರ್ತಿ–ದಂಡಧಾರಿಣಿ. ಪೊಲಬು–ದಾರಿ ತಾರ್ಕುಟ್ಟು–ಅತಿಸಮೀಪ. ಗರುವೆ–ಶ್ರೇಷ್ಠೆ.

## ೬. ವಿರೂಪಾಕ್ಷ ಪಂಡಿತ : 'ರತಿವಿಲಾಪ'

ವಿರೂಪಾಕ್ಷ ಪಂಡಿತನು ಚೆನ್ನಬಸವಪುರಾಣವನ್ನು ಕ್ರಿ. ಶ. ೧೫೮೫ರಲ್ಲಿ ಬರೆದು ಮುಗಿಸಿದಂತೆ ತಿಳಿಯಬರುತ್ತದೆ. ಈತನು ಪಂಪಾವಿರೂಪಾಕ್ಷನ ಭಕ್ತನೂ ವಿಜಯನಗರದ ಹಿರಿಯಮಠದ ಪಟ್ಟಾಧಿಕಾರಿಯೂ ಷಟ್‌ಸ್ಥಲ ಬ್ರಹ್ಮಜ್ಞಾನಿಯೂ ಆಗಿದ್ದನು. ಚೆನ್ನಬಸವಪುರಾಣದಲ್ಲಿ ಚೆನ್ನಬಸವೇಶ್ವರನ ಚರಿತೆ, ಈಶ್ವರನ ಪಂಚವಿಂಶತಿಲೀಲೆ, ವೀರಶೈವಮತತತ್ವ, ಪುರಾತನರ ಹಾಗೂ ನೂತನಪುರಾತನರ ಚರಿತ್ರೆ ಇವೇ ಮೊದಲಾದವುಗಳ ನಿರೂಪಣೆಯಿದೆ. ಮಹಾಕಾವ್ಯದ ಅಂಗವಾದ ಅಷ್ಟಾದಶ ವರ್ಣನೆಗಳನ್ನು ಈ ಕಾವ್ಯದಲ್ಲಿ ಸುಂದರವಾಗಿ ನಿರೂಪಿಸಲಾಗಿದೆ.

ಇಲ್ಲಿಯ ಕಾವ್ಯಭಾಗದಲ್ಲಿ ಪರಶಿವನ ಪಂಚವಿಂಶತಿಲೀಲೆಗಳಲ್ಲಿ ಒಂದಾದ ಕಾಮದಹನ ಪ್ರಸಂಗದ ನಿರೂಪಣೆಯಿದೆ. ತಾರಕಾಸುರನ ಬಾಧೆಗೊಳಗಾದ

ದೇವತೆಗಳಿಂದ ಪ್ರೇರಿತನಾದ ಮನ್ಮಥನು ಶಿವನ ತಪೋಭಂಗವನ್ನುಂಟು ಮಾಡುವುದಕ್ಕಾಗಿ ತನ್ನ ಚತುರಂಗಸೇನೆಯೊಡನೆ ಹೇಮಕೂಟಪರ್ವತಕ್ಕೆ ಬರುವನು. ದೂರದಲ್ಲಿಯೇ ನಂದೀಶನನ್ನು ಕಂಡು ಮನ್ಮಥನು ಅಳವಳಿದು ನಿಂತಿರಲು ಪಾರ್ವತಿಯು ಪುಷ್ಪಕವಿಮಾನದಿಂದ ಅಲ್ಲಿಗೆ ಆಗಮಿಸಿ ಆತನಿಗೆ ಧೈರ್ಯವನ್ನು ತಂದುಕೊಡುವಳು. ಪಾರ್ವತಿಯ ಪುಷ್ಪಕದ ಮರೆಯಲ್ಲಿ ನಿಂತು ಮನ್ಮಥನು ಬಾಣಪ್ರಯೋಗಮಾಡಲು ವಿರೂಪಾಕ್ಷನು ಅತಿಕೋಪದಿಂದ ತನ್ನ ಹಣೆಗಣ್ಣನ್ನು ತೆರೆಯುವನು. ಆತನ ಹಣೆಗಣ್ಣಿನ ಉರಿಗೆ ಮನ್ಮಥನ ಶರೀರವು ಭುಗಿಭುಗಿಲೆಂದು ಉರಿದು ಬೆಂದುಹೋಗುವುದು. ಪತಿಯನ್ನು ಕಳೆದುಕೊಂಡ ರತಿಯು ಮೊರೆಯಿಟ್ಟು ಶೋಕಿಸುವಾಗ ಪಾರ್ವತಿಯು ಆಕೆಯನ್ನು ಸಂತೈಸಿ ಅಭಯವೀಯುವಳು. ಮನ್ಮಥನ ಸೇನಾಸನ್ನಾಹವನ್ನೂ ರತಿವಿಲಾಪವನ್ನೂ ಕವಿಯು ಹೃದಯಂಗಮವಾಗಿ ವರ್ಣಿಸಿರುವನು.

ಸೂಚನೆ: ಹೇಮಕೂಟಾಚಲ–ಪಂಪಾಕ್ಷೇತ್ರದಲ್ಲಿರುವ ಒಂದು ಬೆಟ್ಟ. ಎಸೆ–ಬಾಣಪ್ರಯೋಗಮಾಡಲು. ಅದಿರ್ಗಂತಿ–ಮಾಧವೀಲತೆ.

ಪದ್ಯ ೧—೫: ಅಲರಂಬರಾಯ–ಮನ್ಮಥ. ಕಂಜ–ತಾವರೆ. ಕೈಪ್ರೊಡೆ–ಬಾಣದ ಹಿಂಭಾಗ. ಕುಂದ–ಒಂದು ಬಗೆಯ ಮಲ್ಲಿಗೆ. ಕಿಂಕಿಣಿ–ಗೆಜ್ಜೆ. ಸವಡಿಸು–ಜೋಡಿಸು. ಮುಡಿವಾಳ–ಬಾಳದ ಬೇರಿನ ಜಾತಿಯ ಹುಲ್ಲು. ಸಿಂಜಿನಿ–ಬಿಲ್ಲಿನ ಹೆದೆ. ತಿರು–ಬಿಲ್ಲಿನ ಹೆದೆ. ಝಲ್ಲಿ–ಗೊಂಡೆಗಳ ಸಾಲು.

೬—೧೦: ರಥಾಂಗ–ಚಕ್ರವಾಕಪಕ್ಷಿ. ಚಾಳಂಕಿ–ಒಂದು ಜಾತಿಯ ಪಕ್ಷಿ. ಚೂಳಿ–ಮುಂಭಾಗ. ತಳಪ–ಹೊಳಪು. ಬೇಳಾಗು–ಹುಚ್ಚಾಗು. ಕಾಳಾಗು–ವ್ಯರ್ಥವಾಗು. ಬೆಬ್ಬಳಿಸು–ಭಯಪಡು.

೧೧—೧೫: ಊಳ್–ಕೂಗು. ಆಳಿ–ಗೆಳತಿ. ಇನಿವಿಲ್–ಸವಿಯಾದ (ಕಬ್ಬಿನ) ಬಿಲ್ಲು.

೧೬—೨೦: ತುಱುಗೆವೆ–ದಟ್ಟವಾದ ಎವೆ. ಕೊಳರ್ವಕ್ಕಿ–ಒಂದು ಜಾತಿಯ ನೀರುಹಕ್ಕಿ.

೨೧—೨೭ : ಖತಿ-ಕೋಪ. ಕೆಲೆ-ಉತ್ಸಾಹದಿಂದ ಧ್ವನಿಮಾಡು. ಕಳಿ-ದೂರ ಹೋಗು. ಅಲುಕು-ಚಲಿಸು. ಮಾವ-(ಇಲ್ಲಿ) ವಿಷ್ಣು. ಭಾವ-(ಇಲ್ಲಿ) ಬ್ರಹ್ಮ. ಇಂದುಜೂಟ-ಶಿವ.

## ೭. ಲಕ್ಷ್ಮೀಶ : 'ಮಯೂರಧ್ವಜನ ದೇಹಾರ್ಧದಾನ'

ಕನ್ನಡ 'ಜೈಮಿನಿಭಾರತ' ವನ್ನು ಬರೆದ ಲಕ್ಷ್ಮೀಶನು ಯಾವ ಕಾಲದಲ್ಲಿದ್ದನೆಂಬುದು ಇನ್ನೂ ನಿಷ್ಕರ್ಷೆಯಾಗಿ ತಿಳಿದಿಲ್ಲ; ಈತನು ಕ್ರಿ. ಶ. ಸುಮಾರು ೧೬೦೦ ರಷ್ಟಾದರೂ ಹಿಂದಿನವನಾಗಿರಬೇಕೆಂದು ಮಾತ್ರ ಹೇಳಬಹುದು. ಈತನು ದೇವಪುರದ ಲಕ್ಷ್ಮೀರಮಣಸ್ವಾಮಿಯ ಭಕ್ತ.

ಧರ್ಮರಾಯನ ಅಶ್ವಮೇಧಯಾಗದ ಕುದುರೆ ಕೃಷ್ಣಾರ್ಜುನರ ಬೆಂಗಾವಲಿನಲ್ಲಿ ದೇಶದೇಶಗಳನ್ನು ಸುತ್ತಿ ಮಯೂರಧ್ವಜನ ರಾಜ್ಯಕ್ಕೆ ಬಂದಿತು. ಆತನೂ ಇದೇ ಸಮಯದಲ್ಲಿ ಅಶ್ವಮೇಧಕ್ಕೆ ದೀಕ್ಷೆವಹಿಸಿದ್ದನು. ಎರಡು ಪಕ್ಷಗಳಿಗೂ ಯುದ್ಧ ನಡೆಯಿತು. ಮಯೂರಧ್ವಜನ ಮಗನಾದ ತಾಮ್ರಧ್ವಜನು ಕೃಷ್ಣಾರ್ಜುನರನ್ನು ಮೂರ್ಛೆಗೊಳಿಸಿ ರಣರಂಗದಲ್ಲಿ ಬಿಟ್ಟು ಎರಡು ಯಾಗಾಶ್ವಗಳನ್ನೂ ತಂದೆಯ ಬಳಿಗೆ ತಂದನು. ಮಯೂರಧ್ವಜನು ಕೃಷ್ಣನ ಪರಮಭಕ್ತ. ಕೃಷ್ಣನನ್ನು ಬಿಟ್ಟು ಕುದುರೆಯನ್ನು ತಂದುದಕ್ಕಾಗಿ ಅವನು ಮಗನ ಮೇಲೆ ಕೋಪಗೊಂಡು, ಕೃಷ್ಣದರ್ಶನ ಮಾಡಬೇಕೆಂದು ತವಕಗೊಂಡಿರುತ್ತಾನೆ. ಇಲ್ಲಿ ಎತ್ತಿಕೊಟ್ಟಿರುವ ಕಾವ್ಯಭಾಗವು ಮುಂದಿನ ಪ್ರಸಂಗವನ್ನು ಸುಂದರವಾಗಿ ವರ್ಣಿಸುತ್ತದೆ.

ಸೂಚನೆ : ಮಖ-ಯಾಗ.

೧—೫ : ಈಡಿಱಿ-ಬಲವಾಗಿ ಘಾತಿಸು. ದೇಹಿಕಂ-ಸಾಮಾನ್ಯ ಮನುಷ್ಯ. ಅನುಕರಿಸು-ಆಚರಿಸು. ಸ್ವಸ್ತಿ ಅಸ್ತು-ಒಳ್ಳೆಯದಾಗಲಿ.

೬—೧೦ : ಅಧ್ವರ-ಯಾಗ. ಆರ್ತ-ಸಂಕಟದ ಅಪೇಕ್ಷೆ. ಆರಜ-ಭಾವೋದ್ರೇಕ.

೧೧—೧೫ : ಅಕ್ಕಜ—ಆಶ್ಚರ್ಯ. ಹರಿ—ಸಿಂಹ. ಪಂಚಾನನ-ಸಿಂಹ. ನಾರಸಿಂಹಪ್ರವರ್ತನ—ಪುರುಷಶ್ರೇಷ್ಠರ ನಡೆವಳಿಕೆ. ಅಹ—ಆಗುವ.

೧೬—೨೦ : ಉನ್ನಿಸು—ಆಲೋಚಿಸು. ವಾಯ—ವ್ಯಾಜ, ನೆವ.

೨೧—೨೫ : ಪಾಸಟಿ—ಸಮಾನ. ಅಪ್ಪೈಸು—ಒಪ್ಪಿಸು. ಕಂಧರ—ಕೊರಳು. ಅರಿ—ಕತ್ತರಿಸು. ಅಂತಕೋಪಮ-ಯಮಸದೃಶ.

೨೬—೩೦ : ಪಾಚಿಸು-ಬೇಯಿಸು. ಸೈತಿಡು—ಸಮಾಧಾನಪಡಿಸು. ಸುದಾಮ—ಒಳ್ಳೆಯ ಹಗ್ಗ. ಕೊಯ್ಗಾಱರ್—ಕೊಯ್ಯುವವರು. ನಾಳ್ನುಡಿ—ಗಾದೆ. ಕುರರೀ-ಕಡಲ ಹದ್ದು. ಬೆಗಡುಗೊಳ್—ಭಯಪಡು.

೩೧—೩೫ : ಸೂದಕರ್ಮಜ್ಞ—ಕೊಲೆಗಾರ. ಕರಪತ್ರ—ಕರಗಸ. ಐದೆತನ—ಸೌಮಂಗಲ್ಯ. ಎರವು—ಭೇದ.

೩೬—೪೦ : ಆಪ್ಪೊಡೆ-ಶಕ್ತನಾದರೆ ; ಧಾತು ಆಱು. ಊಣೆಯ—ನ್ಯೂನತೆ. ಕೇಣ—ಮತ್ಸರ, ನೊಂಡತನ. ಸರಿಸದಿಂ—ನೇರವಾಗಿ. ಖಯಖೋಡಿ—ದೋಷಾರೋಪಣೆ. ಅಂಡಲೆ-ಹಿಂಸೆ.

೪೧—೪೫ : ಒಱ್—ಉಕ್ಕು. ಬೆಚ್ಚು—ಕೂಡಿಸಿ. ನಿಚ್ಚಟ—ನಿಶ್ಚಲ. ಸೌದಾಮಿನಿ—ಮಿಂಚು. ಜೀಮೂತ—ಮೋಡ.

೪೬—೫೩ : ಸುಪರ್ಣ—ಗರುಡ. ಧ್ವಾಂತ—ಕತ್ತಲೆ. ಕ್ರತು-ಯಾಗ. ಕ್ಷ್ಮಾಪ—ರಾಜ. ನನ್ನಿ—ಸತ್ಯ. ಎನ್ನುವಂ—ನನ್ನನ್ನೂ. ಚರ್ಮಶೃಂಗ—ಯಾಗದಲ್ಲಿ ಯಜಮಾನನು ಧರಿಸಬೇಕಾದ ಮೃಗಚರ್ಮ ಮತ್ತು ಮೃಗಶೃಂಗ. ಮಾತರಿಶ್ವಮಿತ್ರ—ವಾಯುಮಿತ್ರ, ಅಗ್ನಿ. ಭೇಷಜ—ಔಷಧಿ. ದಂತಿಪುರ—ಹಸ್ತಿನಾವತಿ.

## ೮. ಸರ್ವಜ್ಞ : 'ವಚನಗಳು'

ನಾಡಿನ ತುಂಬ ಸುತ್ತಾಡಿ "ಗುಣಿಗೊಂದು ಗುಟುಕು ನೀರು ಕುಡಿದು" ಸಮಗ್ರ ಕನ್ನಡಿಗರ ಜೀವನದ ಅನುಭವ ಪಡೆದ ಸರ್ವಜ್ಞಕವಿ ಯಾವ ಕಾಲ

ದಲ್ಲಿದ್ದನೆಂಬುದು ಸರಿಯಾಗಿ ತಿಳಿದಿಲ್ಲ. ಕ್ರಿ. ಶ. ೧೬೦೦ ರ ಸುಮಾರಿಗೆ ಇದ್ದನೆಂದು ಊಹಿಸಬಹುದು. ಈತನು ಧಾರವಾಡ ಜಿಲ್ಲೆಯ ಮಾಸೂರಿನಲ್ಲಿ ಜನಿಸಿದನೆಂದು ತಿಳಿಯಬರುತ್ತದೆ.

ಈತನು ಕನ್ನಡದ ತ್ರಿಪದಿಯಲ್ಲಿ ತನ್ನ ಜನಪ್ರಿಯವಾದ ವಚನಗಳನ್ನು ರಚಿಸಿದನು. ಈತನ ವಿಶಾಲವಾದ ಅನುಭವವೂ ಸ್ಪಷ್ಟವಾದಿತ್ವವೂ ತಿರುಳ್ಗನ್ನಡದಿಂದ ರಮ್ಯವಾದ ಈತನ ವಚನಗಳಲ್ಲಿ ಎದ್ದುಕಾಣುತ್ತವೆ. ಅಲ್ಲಿಯ ದಾನ ಮತ್ತು ನೀತಿ ಪದ್ಧತಿಗಳಿಂದ ಈ ಮುಂದಿನ ಕೆಲವು ವಚನಗಳನ್ನು ಆರಿಸಿಕೊಳ್ಳಲಾಗಿದೆ.

ಪರಿಣಾಮವಕ್ಕು—ಶಿವಪದ ದೊರೆಯುವುದು. ಬಯ್ತಿಡು-ಹುಗಿದಿಡು, ಮರೆಮಾಡಿಡು. ಸೊಡರೆಣ್ಣೆ—ದೀಪದ ಎಣ್ಣೆ. ಸಣ್ಣಿಸಿ—ಸಣ್ಣಾಗಿ. ನೆಲನ ಸಾರಿದನ—ನೆಲವನ್ನು ಕಂಡವನ, ತೀರಿಕೊಂಡವನ. ಸುಳ್ಳ-ಸುಳ್ಳು ಮಾತಾಡುವವ. ಹಡೆಗು-ಪಡೆಯುತ್ತದೆ. ಮುಂಡಾಡು—ಅಪ್ಪಿಕೊಳ್ಳು. ಉತ್ತರೆಯು ಬಜೆತಿಹರೆ—ಉತ್ತರಾ ಮಳೆ ಆಗದೆ ಹೋದರೆ. ಹಣ್ಣು—ಮಾಡು.

---